# ಬಿ. ಎಂ. ಶ್ರೀಕಂಠಯ್ಯ

ವಿ. ಎಂ. ಇನಾಂದಾರ್





ಕರ್ನಾಟಕ ಸಾಹಿತ್ಯ ಅಕಾದೆಮಿ
ನೃಪತುಂಗ ರಸ್ತೆ, ಬೆಂಗಳೂರು

B. M. SRIKANTAIYA, a brief introduction by Professor V. M. Inamdar: Published by Karnataka Sahitya Akademi, Bangalore. First Edition 1984 ; pp. 61+8

ಹಕ್ಕುಗಳು : ಲೇಖಕರದು



ಬೆಲೆ : ಒಂದು ರೂಪಾಯಿ

ಮುದ್ರಕರು :
ಸುಧಾರಾಮ ಪ್ರಿಂಟರ್ಸ್
ನಂ. 301, 19ನೇ ಮುಖ್ಯ ರಸ್ತೆ,
ಶ್ರೀನಗರ, ಬೆಂಗಳೂರು–560 050

# ಮುನ್ನುಡಿ

ಕರ್ನಾಟಕ ಸಾಹಿತ್ಯ ಅಕಾದೆಮಿಯ ಪ್ರಕಟಣಾ ಯೋಜನೆಯಲ್ಲಿ, ಆಧುನಿಕ ಕನ್ನಡದ ಹಿರಿಯರನ್ನು ಜನ ಸಾಮಾನ್ಯರಿಗೆ ಪರಿಚಯ ಮಾಡಿ ಕೊಡುವ ಕಿರು ಹೊತ್ತಗೆಗಳನ್ನು ಪ್ರಕಟಿಸುವುದೂ ಒಂದು. ಕಿರೀಟ ಆಕಾರದ ೪೮–೬೪ ಪುಟಗಳ ವ್ಯಾಪ್ತಿಯಲ್ಲಿ ಸ್ಥೂಲವಾಗಿ ಆಯ್ದ ಲೇಖಕರ ಜೀವನ ಸಾಧನೆಗಳನ್ನು ಈ ಹೊತ್ತಗೆಗಳು ನಿರೂಪಿಸುತ್ತವೆ. ಎಲ್ಲ ಕೆಲಸ ಗಳಿಗಿಂತಲೂ ಅಗತ್ಯವಾಗಿ ಜರೂರಾಗಿ ಆಗಬೇಕಾದದ್ದು ಎಂದರೆ ನಮ್ಮನ್ನು ನಾವೇ ತಿಳಿದುಕೊಳ್ಳುವುದು ; ನಮ್ಮ ನಾಡು ನುಡಿ ಸಾಹಿತ್ಯ ಸಂಸ್ಕೃತಿಗಳ ಸ್ವರೂಪವನ್ನು ಅರಿತು ಕೊಳ್ಳುವುದು. ಆಧುನಿಕ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈ ಕೆಲಸವನ್ನು ಪ್ರಸ್ತುತ ಮಾಲೆ ನಿರ್ವಹಿಸಬೇಕೆಂಬುದು ನಮ್ಮ ಆಶಯ.

ಕನ್ನಡದ ಕಣ್ವರೆಂದು ಕೀರ್ತಿತರಾದ ಆಚಾರ್ಯ ಬಿ. ಎಂ. ಶ್ರೀಕಂಠಯ್ಯ ನವರನ್ನು ಕುರಿತ ಪುಸ್ತಕವೇ ಈ ಯೋಜನೆಯ ಮೊದಲ ಪುಸ್ತಕವಾಗಿ ಪ್ರಕಟವಾಗುತ್ತಿರುವುದು ಆಕಸ್ಮಿಕವಾಗಿದ್ದರೂ, ಔಚಿತ್ಯಪೂರ್ಣವೆಂದು ನಾನು ಭಾವಿಸಿದ್ದೇನೆ. ಬಿ. ಎಂ. ಶ್ರೀ. ಅವರು ನಮ್ಮ ನವೋದಯದ ಹರಿಕಾರರು ; ಆಚಾರ್ಯರು. ಈಗ ನಾಡಿನಾದ್ಯಂತ ಅವರ ಶತಮಾನೋತ್ಸವ ಸಮಾರಂಭಗಳು ನಡೆಯುತ್ತಿವೆ. ಈ ಸಂದರ್ಭದಲ್ಲಿ ಅವರನ್ನು ಪರಿಚಯಿಸುವ ಈ ಕಿರು ಹೊತ್ತಗೆಯನ್ನು ಪ್ರಕಟಿಸುವುದು ಕರ್ನಾಟಕ ಸಾಹಿತ್ಯ ಅಕಾದೆಮಿಗೆ ತುಂಬ ಸಂತೋಷವೆನಿಸುತ್ತಿದೆ. ನಮ್ಮ ಜನರು ಇದರ ಪ್ರಯೋಜನ ಪಡೆಯುತ್ತಾರೆಂಬುದರಲ್ಲಿ ನನಗೆ ನಂಬಿಕೆಯಿದೆ. ಇದನ್ನು ಸಕಾಲದಲ್ಲಿ ಸಿದ್ಧ ಪಡಿಸಿಕೊಟ್ಟ ಪ್ರೊಫೆಸರ್ ಇನಾಂದಾರರ ವಿಶ್ವಾಸಕ್ಕೆ ಕೃತಜ್ಞನಾಗಿದ್ದೇನೆ.

(೧)

ಕಳೆದ ಶತಮಾನದ ಕೊನೆಯ ಕಾಲು ಭಾಗವನ್ನು ಮತ್ತು ಶತಮಾನದ ಮೊದಲ ಕಾಲು ಭಾಗವನ್ನು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಸಂಧಿಕಾಲ ಎಂದು ಪರಿಗಣಿಸಲಾಗುತ್ತದೆ. ಸಾಹಿತ್ಯದ ರೀತಿ ವಿಧಾನಗಳಲ್ಲಿ, ಆಶೋತ್ತರಗಳಲ್ಲಿ, ಬೆಳೆದು ನಿಂತ ಪರಂಪರೆಯ ವಿಚಾರಗಳು ಅಸಮರ್ಪಕವೆಂದು ಕಂಡರೂ ಅವನ್ನು ಪೂರ್ತಿಯಾಗಿ ತಿರಸ್ಕರಿಸಲಾಗದೆ, ಹೊಸ ಹವಣಿಕೆಗಳು ತಲೆದೋರುತ್ತಿದ್ದರೂ ಅವುಗಳ ಸ್ವರೂಪ, ಸಾಧ್ಯತೆಗಳು ಸ್ಪಷ್ಟವಾಗಿ ಗೋಚರಿಸದೆ, ಇಂಥ ಮಧ್ಯಾವಧಿ ಸಾಹಿತ್ಯದ ಚರಿತ್ರೆಯಲ್ಲಿ ಹಳೆ ಹೊಸತುಗಳ ನಡುವಿನ ಒಂದು ಬಗೆಯ ತಿಕ್ಕಾಟಕ್ಕೆ ಅವಕಾಶವನ್ನು ಒದಗಿಸುತ್ತದೆ. ಪರಂಪರೆಯ ಬಗೆಯಲ್ಲಿಯ ಅಸಮಾಧಾನ ಸುತ್ತಲಿನ ಬದುಕಿನಲ್ಲಿ ಬದಲಾವಣೆಗಳ ಮೂಲಕವೇ ಉಂಟಾಗಿರುವುದರಿಂದ ಹೊಸ ಶಕ್ತಿ ಪ್ರಭಾವಗಳದ್ದೇ ಮೇಲುಗೈಯಾಗುತ್ತದೆ. ಹಾಗಿದ್ದರೂ ಮುನ್ನಡೆಯಬೇಕಾದ ದಾರಿ ಹೊಸದಾಗಿರುವುದರಿಂದ, ಸಾಧಿಸಬೇಕೆಂದ ಗುರಿಯ ಕಲ್ಪನೆಯೂ ಸ್ಪಷ್ಟವಾಗಿಲ್ಲವಾದುದರಿಂದ ಇಂಥ ಸಂಧಿಕಾಲದ ಸಾಹಿತ್ಯದಲ್ಲಿ ಸಾಧನೆಗಿಂತ ಅಕಾಂಕ್ಷೆಯೇ ಹೆಚ್ಚು ಅರ್ಥವತ್ತಾದ ಅಂಶವಾಗಿರುತ್ತದೆ. ಪರಂಪರೆಯ ಒತ್ತಡಗಳನ್ನು ಪೂರ್ತಿಯಾಗಿ ಬದಿಗಿರಿಸಲಾಗದಿದ್ದರೂ ಹೊಸ ಅಕಾಂಕ್ಷೆಗಳಲ್ಲಿಯ ಮುನ್ನೋಟಕ್ಕೆ ಸಮಕಾಲೀನ ಜೀವನದಲ್ಲಿಯ ಬೆಳವಣಿಗೆಗಳ ಪೋಷಣೆ ಇರುತ್ತದೆ. ಇಂಥ ಸಂದಿಗ್ಧದ ಸಂದರ್ಭದಲ್ಲಿ ಪ್ರತಿಭಾನ್ವಿತರಾದ ಒಬ್ಬರು ಕಾಣಿಸಿಕೊಳ್ಳುತ್ತಾರೆ. ಅವರಿಗೆ ಪರಂಪರೆ ತನ್ನ ಶಕ್ತಿಯನ್ನು ಕಳೆದುಕೊಂಡದ್ದೇಕೆ ಎನ್ನುವುದು ಅರ್ಥವಾಗಿರುವಂತೆ ಹೊಸ ಹಾರೈಕೆಗಳ ಗೊತ್ತುಗುರಿಗಳೂ ಅರ್ಥವಾಗಿರುತ್ತವೆ. ಮುನ್ನಡೆಯಬೇಕಾದ ದಾರಿಯ ಸ್ಪಷ್ಟವಾದ ಕಲ್ಪನೆ ಅವರಿಗಿರುತ್ತದೆ. ಎತ್ತ ಸಾಗಿ ಏನನ್ನು ಸಾಧಿಸಬೇಕಾದದ್ದು ಎನ್ನುವುದನ್ನು ಇಂಥವರು ಗುರುತಿಸಿರುತ್ತಾರೆ. ಇಂಥವರ ಆಲೋಚನೆಗಳು ಮಾರ್ಗಶೋಧಕ ಮಾತ್ರವಲ್ಲವೆ ಮಾರ್ಗದರ್ಶಕವೂ ಆಗುತ್ತವೆ. ಹೊಸ ಯತ್ನಗಳತ್ತ ಗಮನ ಹರಿಯುವಂತೆ ಮಾಡುತ್ತವೆ. ಇಂಥ ಪ್ರಯತ್ನಗಳ ಫಲವಾಗಿ ಹೊಸ ಮಾರ್ಗಗಳು, ಸಾಧ್ಯತೆಗಳು ಗೋಚರಿಸುತ್ತವೆ. ಈ ಶತಮಾನದ ಮೊದಲ ಕಾಲುಭಾಗದಲ್ಲಿಯ ಅಸ್ಪಷ್ಟ ಸನ್ನಿವೇಶದಲ್ಲಿ ಹೊಸ ದಾರಿಗಳನ್ನು ಗುರುತಿಸಿ ಸ್ಪಷ್ಟವಾಗಿ ಸಾಹಿತ್ಯ ಹೊಸದಾರಿಗಳಲ್ಲಿ ಮುನ್ನಡೆಯು

ವಂತೆ ಮಾಡಿದ ಪ್ರತಿಭಾನ್ವಿತರೆಂದು ಕನ್ನಡದ ಕಣ್ಮಣಿಗಳೆನಿಸಿದ ಆಚಾರ್ಯ ಶ್ರೀ ಬಿ. ಎಂ. ಶ್ರೀಕಂಠಯ್ಯನವರು.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿಯ ಹೊಸ ಹವಣಿಕೆಗಳು ನಿಧಾನವಾಗಿಯಾದರೂ ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿದ್ದವು. ಹೊಸ ವಿದ್ಯಾಭ್ಯಾಸಕ್ರಮದ ಪರಿಣಾಮವಾಗಿ ಪಾಶ್ಚಾತ್ಯ ಸಾಹಿತ್ಯ ಕೃತಿಗಳ ಸಂಪರ್ಕ ಉಂಟಾಗಿತ್ತು. ಅಂಥವುಗಳ ಅನುವಾದ ಮಾಡಬೇಕೆಂಬ ಬಯಕೆ ಬಲಗೊಂಡಿತ್ತು. ಷೇಕ್ಸ್‌ಪಿಯರ್ ನಾಟಕಗಳನ್ನು ಮೊದಲ್ಗೊಂಡು ಅನೇಕ ಗದ್ಯ ಕಥೆ ಕಾದಂಬರಿಗಳನ್ನು ಕನ್ನಡದಲ್ಲಿ ಒದಗಿಸುವ ಕೆಲಸ ಮೊದಲಾಗಿತ್ತು. ಬಂಗಾಲಿಯಿಂದ ಬಿ. ವೆಂಕಟಾಚಾರ್ಯರು ಮರಾಠಿಯಿಂದ ಗಳಗನಾಥರು ಅನುವಾದಗಳನ್ನು ರೂಪಾಂತರಗಳನ್ನು ತಂದುಕೊಟ್ಟು ಕಾದಂಬರೀ ಪ್ರಕಾರ ಜನಪ್ರಿಯವಾಗಿ ನೆಲೆ ನಿಲ್ಲುವಂತೆ ಮಾಡಿದ್ದರು. ಈ ಹೊಸ ಸಾಹಿತ್ಯ ಪ್ರಕಾರ ಕೇವಲ ರಂಜನೆಗಾಗಿರದೆ ಪ್ರಚಲಿತ ಸಮಾಜದ ಚಿತ್ರವಾಗಿ ಜನಗಳ ವಡುವಳಿಯಲ್ಲಿಯ ಅಂಕುಡೊಂಕುಗಳ ವಿಮರ್ಶೆಗೆ ಒಂದು ಸಾಧನವಾಗಬಹುದು ಎಂಬ ಸಾಧ್ಯತೆಯನ್ನು ಗುಳವಾಡಿ, ಕರೂರ, ಬೋಳಾರರಂಥ ಲೇಖಕರು ತೋರಿಸಿಕೊಟ್ಟಿದ್ದರು. ಮುಂದ್ದಣ ಹೇಳಿದಂತೆ ಪದ್ಯಕ್ಕಿಂತ ಗದ್ಯ ಹೃದ್ಯವಾಗಿ ಒಂದು ಕಾಲಕ್ಕೆ ಪದ್ಯಕ್ಕಿದ್ದ ಮನ್ನಣೆಯ ಸ್ಥಾನವನ್ನು ಪಡೆಯುವುದರಲ್ಲಿತ್ತು. ಆದರೆ ಗದ್ಯ ಪಡೆದ ಸ್ವಾತಂತ್ರ್ಯ ಪದ್ಯಪ್ರಕಾರಗಳಿಗೆ ಇನ್ನೂ ಲಭ್ಯವಾಗಿರಲಿಲ್ಲ. ವೃತ್ತಬಂಧಗಳ ಬಿಗಿ ಹಿಡಿತದಿಂದ ಬಿಡುಗಡೆಯನ್ನು ಪಡೆಯುವುದು ಅಷ್ಟೊಂದು ಸುಲಭವಾಗಿರಲಿಲ್ಲ. ಇಂಗ್ಲಿಷ್ ಕಾವ್ಯದ ಸೊಗಸನ್ನು ಅನುಭವಿಸಿದ ಕೆಲವರು ಹಲಕೆಲವು ಅನುವಾದಗಳನ್ನು ಮಾಡಿ ಹೊಸ ರುಚಿಗೆ ಅವಕಾಶವನ್ನು ತಂದುಕೊಟ್ಟಿದ್ದರು. ಆ ಕೆಲಸ ವ್ಯಾಪಕವಾಗಿ ನಡೆದಿರಲಿಲ್ಲ. ಒಂದು ಕಡೆ ಪಂಜೆಯವರು, ಕಾಮತರು, ಗೋವಿಂದ ಪೈಗಳಾದರೆ ಇನ್ನೊಂದು ಕಡೆ ಶಾಂತಕವಿಗಳು ಕನ್ನಡ ಕಾವ್ಯಕ್ಕೆ ಹೊಸ ಮಟ್ಟುಗಳನ್ನು ಅಳವಡಿಸುವುದರಲ್ಲಿ ತೊಡಗಿದ್ದರು. ಆ ಎಲ್ಲ ಪ್ರಯತ್ನಗಳು ಪ್ರಾಯೋಗಿಕವಾಗಿದ್ದುದಲ್ಲದೆ ಪರಂಪರೆಯ ಪುರಸ್ಕರ್ತರ ಟೀಕೆಗೆ ಗುರಿಯಾಗುತ್ತಿದ್ದವು. ಆದರೆ ಕಾವ್ಯ ತನ್ನನು ಬಂಧಿಸಿದ ಸಂಕೋಲೆಗಳನ್ನು ಕೊಡವಿ ಹಾಕುವುದರಲ್ಲಿತ್ತು. ಬದುಕಿಗೆ ಹತ್ತಿರವಾಗಿ ಬೆಳೆದಾಗಲೆ ಕಾವ್ಯ

ಸಾರ್ಥಕವಾಗುತ್ತದೆ. ಹೃದ್ಯವಾಗಬಲ್ಲದು, ಏನ್ನುವುದನ್ನು ಮುಂಚಿನ್ನೇ ಒಂದು ರೀತಿಯಲ್ಲಿ ತೋರಿಸಿಕೊಟ್ಟಿದ್ದ. ಆದರೆ ಮುನ್ನಡೆಯ ದಾರಿ ಸ್ಪಷ್ಟವಾಗಿರಲಿಲ್ಲ. ದಾರಿಯನ್ನೂ ಗುರಿಯನ್ನೂ ಸ್ಪಷ್ಟವಾಗಿಸಿಕೊಂಡವರು ಮಾರ್ಗದರ್ಶನವನ್ನು ಮಾಡಬೇಕಾಗಿತ್ತು. ಅಂಥ ಸನ್ನಿವೇಶದಲ್ಲಿ ಶ್ರೀಕಂಠಯ್ಯನವರು ಆ ಕೆಲಸ ವನ್ನು ಕೈಕೊಂಡು ಸಮರ್ಥವಾಗಿ ಪೂರೈಸಿದರು.

ಅಂದಿನ ಸಂದರ್ಭದಲ್ಲಿ ಅದೊಂದು ಸುಲಭದ ಕೆಲಸವಾಗಿರಲಿಲ್ಲ. ಕನ್ನಡ ಸಾಹಿತ್ಯದ ಭವಿತವ್ಯವನ್ನು ರೂಪಿಸುವುದಕ್ಕೆ ಮೊದಲು ಕನ್ನಡಕ್ಕೆ ಒಂದು ಸ್ಥಾನ ವನ್ನು ಗಳಿಸಬೇಕಾದದ್ದು ಮೊದಲ ಕೆಲಸವಾಗಿತ್ತು. ಒಂದು ಕಡೆ ಸಂಸ್ಕೃತ ವಾದರೆ ಇನ್ನೊಂದು ಕಡೆ ಇಂಗ್ಲಿಷ್; ಇವೆರಡರ ಮಧ್ಯದಲ್ಲಿ ಕನ್ನಡವನ್ನು ಕೇಳುವವರೇ ಇರಲಿಲ್ಲ. ಸಂಸ್ಕೃತ ಪಂಡಿತರ ಭಾಷೆ. ನಮ್ಮ ಸಂಸ್ಕೃತಿಯ ಸಾರವನ್ನೆಲ್ಲ ಒಳಗೊಂಡ ಭಾಷೆ. ಅದನ್ನು ತಿಳಿಯದವ ಓದಿದವನೇ ಅಲ್ಲ ಎನ್ನುವ ಘಟ್ಟಿಗಿನ ಮನ್ನಣೆ ಆ ಭಾಷೆಗಿತ್ತು. ಇದಕ್ಕೆ ಪ್ರತಿಯಾಗಿ ಆಳರಸರ ಭಾಷೆಯಾದ ಇಂಗ್ಲಿಷಿಗೆ ವ್ಯವಹಾರ ಪ್ರಪಂಚದಲ್ಲಿ ವಿಶೇಷವಾದ ಮಾನ್ಯತೆ ಸಹಜವಾಗಿಯೇ ಪ್ರಾಪ್ತವಾಗಿತ್ತು. ಇಂಗ್ಲಿಷ್ ತಿಳಿದವನಿಗೆ ಕೆಲಸ, ಅಧಿ ಕಾರ, ಸ್ಥಾನಮಾನಗಳು ಸಿಕ್ಕುವ ಅನುಕೂಲ ಒಂದು. ಅಲ್ಲದೆ ಆಧುನಿಕ ಪ್ರಪಂಚದಲ್ಲಿಯ ವಿಷಯ ವೈವಿಧ್ಯದ ಪರಿಚಯ ಇಂಗ್ಲಿಷಿನ ಮುಖಾಂತರವೇ ಸಾಧ್ಯವೆನ್ನುವುದು ಇನ್ನೊಂದು. ಅದರ ಮೂಲಕ ಪ್ರಪಂಚ ಜ್ಞಾನವನ್ನು ಮಾತ್ರವಲ್ಲದೆ ಜೀವನಾನುಕೂಲಗಳನ್ನೂ ಗಳಿಸಬಹುದಾದ ಅನುಕೂಲಗಳಿದ್ದಾಗ ಕನ್ನಡದಿಂದ ಏನಾಗಬೇಕು ಎಂಬ ಭಾವನೆ ಸಹಜವಾಗಿಯೇ ಬೆಳೆಯುತ್ತಿದ್ದಿತು. ಸಂಸ್ಕೃತದವರ ದೃಷ್ಟಿಯಲ್ಲಿ ಕನ್ನಡ ಪಾಮರರ ಭಾಷೆ; ಇಂಗ್ಲಿಷ್ ಬಲ್ಲವರ ದೃಷ್ಟಿಯಲ್ಲಿ ಅದು ಪ್ರಯೋಜನವಿಲ್ಲದ ಭಾಷೆ; ಈ ಪರಿಸ್ಥಿತಿಯಲ್ಲಿ ಕನ್ನಡ ಬದುಕಿಯೂ ಬದುಕಿರದ ಹಾಗಿತ್ತು. ಹಿಂದಿನ ಕಾಲದ ಅದರ ಹಿರಿಮೆಯನ್ನು ಬಲ್ಲವರು ಕೂಡ ಎಲ್ಲವೂ ಒಂದೇ ತರಹ ಆಧುನಿಕ ಜೀವನಕ್ಕೆ ಯಾವೊಂದು ಬಗೆಯಲ್ಲಿ ಸಂಬಂಧವಿಲ್ಲದವು ಎಂದು ಅದನ್ನು ಕಡೆಗಣಿಸುತ್ತಿದ್ದರು. ಹಾಗೆಂದೇ ಕನ್ನಡದ ಉದ್ಧಾರದ ಕನಸನ್ನು ಕಟ್ಟಿಕೊಂಡ ಶ್ರೀಕಂಠಯ್ಯನವರು ಕನ್ನಡ ಸಾಹಿತ್ಯದ ಮುನ್ನಡೆಯನ್ನು ಕುರಿತು ಚಿಂತಿಸುವ ಮೊದಲು ಕನ್ನಡ ಮಾತು

ತಳೆಯುತ್ತಿರುವ ಬಗೆಯನ್ನು ಕುರಿತು ಚಿಂತಿಸಬೇಕಾಗಿತ್ತು. ಕನ್ನಡದ ಸೊಗಸನ್ನು ಮಾತ್ರವಲ್ಲ. ಅದರ ಪ್ರಯೋಜನವನ್ನು ಮನವರಿಕೆ ಮಾಡಿಕೊಡಬೇಕಾಗಿತ್ತು. ಸಂಸ್ಕೃತ ಬೇಡವೆಂದಲ್ಲ: ಇಂಗ್ಲಿಷ್ ಬೇಡವೆಂದಲ್ಲ: ಅವೆರಡನ್ನೂ ಕನ್ನಡದ ಮುನ್ನಡೆಗಾಗಿ ಬಳಸಿಕೊಂಡು ನಮ್ಮದೇ ಆದ ನುಡಿಯನ್ನು ಶ್ರೀಮಂತವಾಗಿಸುವುದು ಹೇಗೆ ಎಂಬ ಯೋಜನೆ ಶ್ರೀಯವರ ಜೀವನದ ಆಕಾಂಕ್ಷೆಯಾಯಿತು.

ಶ್ರೀಕಂಠಯ್ಯನವರು ಕನ್ನಡದ ಪುನರುತ್ಥಾನಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಸಿದರು. ಅವರು ವಿಶ್ವವಿದ್ಯಾನಿಲಯದಲ್ಲಿ ಓದಿದ್ದು ಇಂಗ್ಲಿಷ್ ಸಾಹಿತ್ಯವನ್ನು : ಮುಂದೆ ಮೂವತ್ತಮೂರು ವರ್ಷ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ–ಪ್ರಾಧ್ಯಾಪಕರಾಗಿ ಪಾಠ ಹೇಳಿದ್ದು ಇಂಗ್ಲಿಷ್ ಸಾಹಿತ್ಯವನ್ನು ಎನ್ನುವುದು ಒಂದು ವಿಶೇಷ. ಅವರು ಇಂಗ್ಲಿಷ್ ಓದಿರದಿದ್ದರೆ ಈ ಕೆಲಸಕ್ಕೆ ಅವರು ತೊಡಗುತ್ತಿದ್ದರೊ ಇಲ್ಲವೋ ಹೇಳಲಾಗುವುದಿಲ್ಲ. ಆದರೆ ಆ ಸಾಹಿತ್ಯದ ಆಳವಾದ ಅಧ್ಯಯನದ ಫಲವಾಗಿ ಕನ್ನಡವನ್ನು ಬಾಧಿಸುತ್ತಿದ್ದ ಕೊರತೆಗಳನ್ನು ಕಾಣುವುದು ಅವರಿಗೆ ಸಾಧ್ಯವಾಯಿತು. ಮುನ್ನಡೆಯಬಹುದಾದ ದಾರಿಯೂ ಗೋಚರಿಸಿತು. ಅವರು ಇಂಗ್ಲಿಷನ್ನು ಕನ್ನಡಕ್ಕಾಗಿ ಬಳಸಿದರು—ಇಂಗ್ಲಿಷ್ ಸಾಹಿತ್ಯದ ಜ್ಞಾನವನ್ನು ಮಾತ್ರವಲ್ಲ: ಇಂಗ್ಲಿಷ್ ಪ್ರಾಧ್ಯಾಪಕರೆಂಬ ತಮ್ಮ ಸ್ಥಾನವನ್ನು ಕೂಡ ಅವರು ಕನ್ನಡಕ್ಕೊಂದು ಸ್ಥಾನವನ್ನು ತಂದು ಕೊಡುವುದಕ್ಕಾಗಿ ಬಳಸಿದರು. ಇಂಗ್ಲಿಷಿನಿಂದ ಕನ್ನಡಕ್ಕೆ ಆದ, ಆಗಬಹುದಾದ, ಮಹದುಪಕಾರಕ್ಕೆ ಅವರ ಜೀವನಕಾರ್ಯ ಒಂದು ಸಂಕೇತವಾಯಿತು.

(೨)

ಶ್ರೀಕಂಠಯ್ಯನವರು ಜನ್ಮತಾಳಿದ್ದು ೧೮೮೪ನೇ ಇಸವಿಯ ಜನವರಿ 3 ರಂದು. ತಾಯಿ ಭಾಗೀರಥಮ್ಮನವರ ತವರಾದ ತುಮಕೂರು ಜಿಲ್ಲೆಯ ಸಂಪಿಗೆ ಗ್ರಾಮದಲ್ಲಿ. ತಂದೆ ಬೆಳ್ಳೂರ ಮೈಲಾರಯ್ಯನವರು ಶ್ರೀರಂಗಪಟ್ಟಣದಲ್ಲಿ ಅನುಕೂಲವಂತ ನ್ಯಾಯವಾದಿಗಳಾಗಿದ್ದರು. ಮೂವರು ಗಂಡು ಇಬ್ಬರು ಹೆಣ್ಣು ಮಕ್ಕಳಲ್ಲಿ ಹಿರಿಯರಾಗಿ ಹುಟ್ಟಿದ ಶ್ರೀಕಂಠಯ್ಯನವರಿಗೆ ಅಕ್ಷರಾಭ್ಯಾಸ ಸಂಪಿಗೆಯಲ್ಲಿ. ಅನಂತರ ಪ್ರಾಥಮಿಕ ವಿದ್ಯಾಭ್ಯಾಸವೆಲ್ಲ ಶ್ರೀರಂಗಪಟ್ಟಣದಲ್ಲಿಯೇ

ಆಯಿತು. ಹುಡುಗರಾಗಿದ್ದಾಗ ಅನೇಕ ಬಗೆಯ ಪುಂಡಾಟಗಳಲ್ಲಿ ತೊಡಗಿರುತ್ತಿದ್ದ ಕಥೆಗಳಿವೆ. ಪ್ರೌಢವ್ಯಾಸಂಗಕ್ಕಾಗಿ ಅವರು ಮೈಸೂರಿಗೆ ತೆರಳಿದಾಗ ಮುಂದೆ ಹೆಸರುವಾಸಿಗಳಾದ ಎನ್. ಎಸ್. ಸುಬ್ಬರಾಯರು, ಹಿರಿಯ ವಕೀಲರು ವಾಗ್ಮಿಗಳು ಎಂದು ಪ್ರಸಿದ್ಧರಾದ ಎಂ. ಜಿ. ವರದಾಚಾರ್ಯರು, ಪ್ರಾಧ್ಯಾಪಕ ಅಣ್ಣಾಜೀರಾಯರು ಮತ್ತು ಎಂಜಿನಿಯರ್ ವೆಂಕಟಸುಬ್ಬರಾಯರು ಶ್ರೀಕಂಠಯ್ಯನವರ ಸಹಪಾಠಿಗಳಾಗಿದ್ದರು. ೧೯೦೩ ರಲ್ಲಿ ಎಫ್. ಎ. ಪರೀಕ್ಷೆಯನ್ನು ಮುಗಿಸಿ ಪದವಿ ಶಿಕ್ಷಣಕ್ಕಾಗಿ ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಸೇರಿ ೧೯೦೬ ರಲ್ಲಿ ಬಿ.ಎ. ಪದವಿಯನ್ನು ಪಡೆದರು. ಅಷ್ಟರಲ್ಲಿ ಚಿತ್ರದುರ್ಗದಲ್ಲಿ ಅಮಲ್ದಾರರಾಗಿದ್ದ ರಾಮಸ್ವಾಮಯ್ಯನವರ ಹಿರಿಯ ಮಗಳು ಗುಂಡಮ್ಮನವರೊಂದಿಗೆ ಅವರಿಗೆ ಮದುವೆಯಾಗಿತ್ತು.

ಮದರಾಸಿನಲ್ಲಿ ಎಂ. ಎ. ಗಾಗಿ ಓದುತ್ತಿದ್ದಂತೆಯೇ ೧೯೦೭ ರಲ್ಲಿ ಬಿ. ಎಲ್. ಪದವಿಯನ್ನು ಪಡೆದುಕೊಂಡದರಲ್ಲದೆ ತಮಿಳು ಭಾಷೆಯ ಆಳವಾದ ವ್ಯಾಸಂಗವನ್ನೂ ಮಾಡಿದರು. ಕನ್ನಡ ಹಾಗೂ ತಮಿಳಿಗೆ ಸಮಾನವಾದ ಒಂದು ವ್ಯಾಕರಣವನ್ನು ರಚಿಸುವ ಯೋಜನೆಯನ್ನು ಆಗಲೇ ಮಾಡಿಕೊಂಡಿದ್ದರು. ಅವರೆ ಮದರಾಸಿನಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಓದುತ್ತಿದ್ದಂತೆಯೇ ಅವರಲ್ಲಿ ಕನ್ನಡದ ಯೋಚನೆ ಬಲಿಯುತ್ತಿತ್ತು. ಷೇಕ್ಸ್‌ಪಿಯರನ ಕೃತಿಗಳನ್ನು ಗ್ರೀಕ್ ನಾಟಕಗಳನ್ನು ಅನುವಾದಿಸಿ ಕನ್ನಡಕ್ಕೆ ಹೊಸ ಚೈತನ್ಯವನ್ನು ಒದಗಿಸುವ ಹತ್ತಾರು ಕನಸುಗಳನ್ನು ಕಂಡ ಕಾಲ ಅದಾಗಿತ್ತು. ಕನ್ನಡ ಮಾತು ತಲೆಯೆತ್ತುವ ಬಗೆಯನ್ನು ಕುರಿತು ಅವರು ಆಗ ಚಿಂತಿಸುತ್ತಿದ್ದರಲ್ಲದೆ ಒಂದು ಸ್ಪಷ್ಟವಾದ ಯೋಜನೆಯನ್ನು ತಮ್ಮಷ್ಟಕ್ಕೆ ಸಿದ್ಧವಾಗಿಸಿಕೊಂಡಿದ್ದರೆಂದು ಕಾಣುತ್ತದೆ. ಆ ಯೋಜನೆ ಎಷ್ಟು ಖಚಿತವಾಗಿತ್ತು, ಎಂಥ ದೂರ ದೃಷ್ಟಿಯದಾಗಿತ್ತು ಎನ್ನುವುದನ್ನು ಅವರು ೧೯೧೧ರಲ್ಲಿ ಧಾರವಾಡದ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಮಾಡಿದ ಭಾಷಣ ಸ್ಪಷ್ಟವಾಗಿಸುತ್ತದೆ.

ಇಂಗ್ಲಿಷ್ ಅಧ್ಯಾಪಕರೆಂದು ೧೯೦೯ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕೆಲಸಕ್ಕೆ ಸೇರಿದ ಶ್ರೀಕಂಠಯ್ಯನವರು ಮುಂದಿನ ಐದು ವರ್ಷಗಳಲ್ಲಿ ಸಮರ್ಥ ಬೋಧಕರೆಂದು ಹೆಸರು ಗಳಿಸಿದರಲ್ಲದೆ ಉಪಪ್ರಾಧ್ಯಾಪಕರಾಗಿ ಬಡ

ತಿಯನ್ನು ಪಡೆದರು. ಇಬ್ಬರು ಹೆಣ್ಣು ಮಕ್ಕಳ ನಡುವೆ ಒಬ್ಬ ಮಗ ಐದು ಮಕ್ಕಳಾಗಿದ್ದರು. ಅನುಕೂಲ ದಾಂಪತ್ಯ. ಮೆಚ್ಚಿಕೊಂಡ ಕೆಲಸದಲ್ಲಿ ಯಶಸ್ಸು. ಮೂವರು ಮಕ್ಕಳು ಎಲ್ಲವೂ ಸೇರಿ ಶ್ರೀಕಂಠಯ್ಯನವರ ಜೀವನದ ವಸಂತಕಾಲ ಆದಾಗಿತ್ತು. ಆದರೆ ಪಕ್ಕದಲ್ಲಿಯೇ ದುರಂತ ಹೊಂಚು ಹಾಕಿ ನಿಂತಿತ್ತು. ಕಣ್ಣು ನೋವಿನಿಂದ ಬಳಲುತ್ತಿದ್ದ ಮಗ ಏನೋ ಅಚಾತುರ್ಯದ ಪರಿಣಾಮವಾಗಿ ಕುರುಡಾದ. ಮುಂದೆ ಕೆಲವೇ ಸಮಯದಲ್ಲಿ ಹೆರಿಗೆಗಾಗಿ ಆಸ್ಪತ್ರೆ ಸೇರಿದ ಮಡದಿ ಜ್ವರಕ್ಕೆ ತುತ್ತಾದರು. ಹೆತ್ತಿದ್ದ ಗಂಡು ಮಗುವೂ ತೀರಿತು. ಮಗನಿಗೆ ಕುರುಡು. ಅಕಾಲ ಪತ್ನೀವಿಯೋಗದಂತ ದುಃಖಗಳನ್ನು ಶ್ರೀಕಂಠಯ್ಯನವರು ನುಂಗಿಕೊಂಡು ತಮ್ಮ ಜೀವನವನ್ನು ಸಾಹಿತ್ಯದ ಒಂದು ತಪಸ್ಸನ್ನಾಗಿಸಿಕೊಂಡರು. ಅವರ ತಾಳ್ಮೆಯನ್ನು ಪರೀಕ್ಷಿಸುತ್ತಿರುವಂತೆ ಕೆಲವು ವರ್ಷಗಳ ನಂತರ ಮತ್ತೆ ದುರ್ದೈವ ಅವರ ಬದುಕನ್ನು ಕವಿಯಿತು. ಹಿರಿಯಳಿಯಂದಿರು ಅಕಾಲ ಮರಣಕ್ಕೆ ತುತ್ತಾದರು. ಅತನ ಉತ್ತರಕ್ರಿಯೆಗಳು ಮುಗಿದ ದಿನವೇ ತಾಯಿ ಭಾಗೀರಥಮ್ಮನವರು ತೀರಿದರು. ಇಷ್ಟೆಲ್ಲವನ್ನು ಸಹಿಸಿಕೊಂಡ ಶ್ರೀಕಂಠಯ್ಯನವರು ತಮ್ಮ ಮನಸ್ಸನ್ನು ಕಹಿಯಾಗಬಿಡಲಿಲ್ಲ. ದುಃಖದ ಬಗೆಯಲ್ಲಿ ಆಳವಾದ ಮರುಕ ಅವರ ಸ್ವಭಾವದಲ್ಲಿ ಆಳವಾಗಿ ಬೇರೂರಿ ಬೆಳೆಯಿತು.

ಮೂವತ್ತರ ಹರೆಯದಲ್ಲಿಯೇ ಬದುಕನ್ನು ಎರಗಿದ ದುರಂತ ತಮ್ಮ ಪಟ್ಟಕ್ಕೆ ಆಗಲೆ ನಿರ್ಧರಿಸಿಕೊಂಡಿದ್ದ ತಮ್ಮ ಜೀವನದ ಧ್ಯೇಯ ಸಾಧನೆಯತ್ತ ಶ್ರೀಕಂಠಯ್ಯನವರ ಬದುಕನ್ನು ನಡೆಸಿತು. ಮುಂದಿನ ಹನ್ನೆರಡು ವರ್ಷಗಳ ಕಾಲ ಒಂದು ತಪಸ್ಸಿಗೆ ತೊಡಗಿದವರಂತೆ ತಮ್ಮ ಅಧ್ಯಾಪನದ ವಿಷಯವಾದ ಇಂಗ್ಲಿಷ್ ಸಾಹಿತ್ಯದ ವ್ಯಾಸಂಗದಲ್ಲಿ, ಜೊತೆಯಲ್ಲಿ ಕನ್ನಡದ ಪುನರುತ್ಥಾನಕ್ಕಾಗಿ ಮಾಡಿಕೊಳ್ಳಬೇಕಾಗಿದ್ದ ಸಿದ್ಧತೆಯನ್ನು ಮಾಡಿಕೊಳ್ಳುವುದರಲ್ಲಿ ತೊಡಗಿದರು. ಇಂಗ್ಲಿಷ್ ಸಾಹಿತ್ಯದ ವ್ಯಾಸಂಗಕ್ಕೆ ಅವಶ್ಯಕವಾದ ಯೂರೋಪಿಯನ್ ಸಾಹಿತ್ಯದ ಪರಿಚಯವನ್ನು ಭಾಷಾಂತರಗಳ ಮೂಲಕವಾದರೆ ಗ್ರೀಕ್ ಸಾಹಿತ್ಯವನ್ನು ಗ್ರೀಕ್ ಭಾಷೆಯನ್ನು ಕಲಿತುಕೊಂಡೇ ಪ್ರಾಚೀನ ದುರಂತ ನಾಟಕದ ಪರಂಪರೆಯ ಘನವಾದ ಕೃತಿಗಳನ್ನು ಮೂಲದಲ್ಲಿಯೇ ಓದಿಕೊಂಡರು. ಅವುಗಳ ಹಿರಿಮೆಗೆ ಮನಸೋತರು. ಇಂಥ ಅವಿರತವಾದ ಅಧ್ಯಯನ, ಕನ್ನಡ ನಾಡು

ನುಡಿಗಳ ಬಗೆಯಲ್ಲಿಯ ಅಖಂಡವಾದ ಪ್ರೀತಿ—ಇವೆರಡರ ಮೂಲಕವೇ ಶ್ರೀಕಂಠಯ್ಯನವರು ತಮ್ಮ ಪಾಲಿಗೆ ಬಂದ ವಿಪತ್ಪರಂಪರೆಯನ್ನು ಮೀರಿ ನಿಲ್ಲುವುದು ಸಾಧ್ಯವಾಯಿತು. ಕನ್ನಡ ಅವರಿಂದ ಉಳಿಯಿತು ಎನ್ನುವ ಮಾತು ನಿಜವಾಗಿದ್ದಷ್ಟೂ ಕನ್ನಡದಿಂದ ಅವರು ಉಳಿದರು ಎನ್ನುವ ಮಾತೂ ಅಷ್ಟೇ ನಿಜವಾಯಿತು.

ಪ್ರಾಧ್ಯಾಪಕರಾಗಿ ಬಡತಿಯನ್ನು ಪಡೆಯುವ ಸಂದರ್ಭ ಬಂದಾಗ ಮೇಲು ದರ್ಜೆಯ ಕನ್ನಡ ಪ್ರಾಧ್ಯಾಪಕತ್ವಕ್ಕೆ ಬದಲಾಗಿ ಕೆಳದರ್ಜೆಯ ಇಂಗ್ಲಿಷ್ ಪ್ರಾಧ್ಯಾಪಕತ್ವವನ್ನು ಶ್ರೀಕಂಠಯ್ಯನವರು ಒಪ್ಪಿಕೊಂಡರೆನ್ನುವುದು ಅವರು ತಮ್ಮ ವಿದ್ವತ್ತನ್ನು ಮಾತ್ರವಲ್ಲದೆ ತಮ್ಮ ಸ್ಥಾನಮಾನವನ್ನು ಕನ್ನಡದ ಏಳಿಗೆ ಗಾಗಿ ಬಳಸುತ್ತಿದ್ದರೆನ್ನುವುದನ್ನು ತೋರಿಸುತ್ತದೆ. ಇಂಗ್ಲಿಷ್ ಪ್ರಾಧ್ಯಾಪಕರಾಗಿ ತಾವು ಗಳಿಸಬಹುದಾದ ಮನ್ನಣೆ ಕನ್ನಡದ ಕೆಲಸಕ್ಕೆ ಒಂದು ಮರ್ಯಾದೆ ಯನ್ನು ತಂದುಕೊಡುತ್ತಿದ್ದ ಕಾಲ ಅದಾಗಿತ್ತು. ಅಲ್ಲದೆ ತಮ್ಮ ವಿದ್ವತ್ತು ಹಾಗು ಬೋಧನ ಸಾಮರ್ಥ್ಯದ ಬಗೆಯಲ್ಲಿ ಆತ್ಮವಿಶ್ವಾಸವುಳ್ಳ ಅವರು ಯಾವ ಆಂಗ್ಲ ಪ್ರಾಧ್ಯಾಪಕನಿಗೂ ತಾವು ಕಡಿಮೆಯವರಲ್ಲ ಎಂದು ತೋರಿಸಿಕೊಡ ಬೇಕಾದ ಅಗತ್ಯವೂ ಅಂದಿನ ಸಂದರ್ಭದಲ್ಲಿದ್ದಿತು. ಆಳರಸರ ಪ್ರತಿನಿಧಿಗಳಾದ ವಿದೇಶೀಯರು ಎಲ್ಲಕ್ಕೂ ಮೇಲೆ. ಆ ಮೇಲೆ ವಿದೇಶಗಳಲ್ಲಿ ವಿದ್ಯಾಭ್ಯಾಸ ಮಾಡಿ ಬಂದ ಭಾರತೀಯರು. ಕೊನೆಯಲ್ಲಿ ಇಲ್ಲಿಯ ವಿಶ್ವವಿದ್ಯಾನಿಲಯಗಳಲ್ಲಿ ಓದಿದವರು ಎಂಬ ಒಂದು ಬಗೆಯ ತಾರತಮ್ಯದ ಶ್ರೇಣಿವ್ಯವಸ್ಥೆ ಅಧ್ಯಾಪಕ ವರ್ಗದಲ್ಲಿತ್ತು. ಶ್ರೀಕಂಠಯ್ಯನವರಂಥ ಸಮರ್ಥ ಬೋಧಕರಿಗೆ ಈ ತಾರತಮ್ಯ ದಿಂದ ಬೇಸರವಾಗಿ ತಾವು ಯಾರಿಗೂ ಕಡಿಮೆಯವರಲ್ಲ ಎಂದು ತೋರಿಸ ಬೇಕೆಂಬ ಅಭಿಲಾಷೆ ಅವರಲ್ಲಿ ಬೆಳೆದಿದ್ದರೆ ಅದನ್ನು ಸ್ವಾಭಿಮಾನದ ಒಂದು ಬಗೆ ಎಂದೇ ಹೇಳಬೇಕು. ತಮ್ಮ ಆಳವಾದ, ಪರಿಷ್ಕಾರವಾದ ವ್ಯಾಸಂಗದ ಮೂಲಕ ತಾವು ಯಾರಿಗೂ ಕಡಿಮೆಯವರಲ್ಲ ಎಂದು ತೋರಿಸಿಕೊಟ್ಟರು. ಅವರ ಇಲಾಖೆಯ ಆಂಗ್ಲ ಪ್ರಾಧ್ಯಾಪಕರೇ ಶ್ರೀಕಂಠಯ್ಯನವರು ಆಕ್ಸ್‌ಫರ್ಡಿಗೋ ಕೇಂಬ್ರಿಜ್‌ಗೋ ಹೋದರೆ ಅಲ್ಲಿಯವರು ಅವರನ್ನು ಹಿಂದಕ್ಕೆ ಹೋಗಬಿಡುವು ದಿಲ್ಲ ಎಂದು ಹೇಳುತ್ತಿದ್ದರಂತೆ. ಮೂಲ ಕೃತಿಗಳನ್ನಲ್ಲದೆ ಅವನ್ನು ಕುರಿತಂತೆ

ಬಂದ ವಿಶ್ಲೇಷಣಾತ್ಮಕ ವಿಮರ್ಶೆಗಳನ್ನು ಅವರು ಓದಿಕೊಂಡಿರುತ್ತಿದ್ದರು. ಆದರೆ ಬೇರೊಬ್ಬರ ಅಭಿಪ್ರಾಯಕ್ಕೆ ಸೋತುಬೀಳದೆ ಸ್ವತಂತ್ರವಾಗಿ ಯೋಚನೆ ಮಾಡಬಲ್ಲವರೂ ಅವರಾಗಿದ್ದರಿಂದ ಅವರ ಪ್ರವಚನಗಳು ಹತ್ತಾರು ದೃಷ್ಟಿಗಳನ್ನು ಒಳಗೊಂಡಿರುತ್ತಿದ್ದವು.

ಹೀಗೆ ವಿದ್ವಾಂಸರೆಂದು, ಸಮರ್ಥ ಪ್ರಾಧ್ಯಾಪಕರೆಂದು ಹೆಸರು ಗಳಿಸಿದ ಶ್ರೀಕಂಠಯ್ಯನವರನ್ನು ಸರಕಾರದವರು ೧೯೨೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಎಂದು ನಿಯಮಿಸಿದಾಗ ಆ ನೇಮಕದಿಂದ ಕನ್ನಡದ ಕೆಲಸವನ್ನು ಮುಂದುವರಿಸುವುದಕ್ಕೆ ತುಂಬಾ ಅನುಕೂಲವಾಯಿತು. ಆ ಅವಧಿಯಲ್ಲಿ ಮೊದಲ ಬಾರಿ ಮಹಾರಾಜಾ ಕಾಲೇಜಿನಲ್ಲಿ ಸ್ನಾತಕೋತ್ತರ ಕನ್ನಡ ವಿಭಾಗವನ್ನು ತೆರೆಯಲಾಯಿತು. ಶ್ರೀಕಂಠಯ್ಯನವರನ್ನೇ ಮೊದಲ ಗೌರವ ಪ್ರಾಧ್ಯಾಪಕರನ್ನಾಗಿ ನಿಯಮಿಸಲಾಯಿತು. ಇದರಿಂದ ಕನ್ನಡಕ್ಕೆ ಉಚ್ಚ ವ್ಯಾಸಂಗಾವಕಾಶಗಳು ದೊರಕುವಂತಾಗಿ ಒಂದು ಮನ್ನಣೆಯ ಸ್ಥಾನವೂ ದೊರಕಿದಂತಾಯಿತು. ತಮ್ಮ ಆಡಳಿತಾಧಿಕಾರದ ಕಾರ್ಯಗಳ ಜೊತೆಯಲ್ಲಿ ಶ್ರೀಕಂಠಯ್ಯನವರು ಕನ್ನಡ ಸಾಹಿತ್ಯ ಚರಿತ್ರೆ, ಛಂದಸ್ಸು ಮುಂತಾದ ವಿಷಯ ಪಾಠ ಹೇಳುತ್ತಿದ್ದರು.

ಶ್ರೀಕಂಠಯ್ಯನವರು ರಿಜಿಸ್ಟ್ರಾರ್ ಆಗಿದ್ದ ಅವಧಿಯಲ್ಲಿ ರೂಪುಗೊಂಡ ಇನ್ನೊಂದು ಕಾರ್ಯಯೋಜನೆಯೆಂದರೆ ಕನ್ನಡ ಗ್ರಂಥ ಮಾಲೆಯ ಪ್ರಕಟನೆ, ಇದು ಪ್ರಾರಂಭವಾದದ್ದು ೧೯೩೦ರಲ್ಲಾದರೂ ಅದಕ್ಕಾಗಿ ಎಲ್ಲ ಸಿದ್ಧತೆಗಳನ್ನು ಶ್ರೀಕಂಠಯ್ಯನವರೇ ಮಾಡಿದ್ದರು. ಹಿಂದಿನ ಕಾವ್ಯಗಳ ಕೆಲವೊಂದು ಭಾಗಗಳನ್ನು ಮಾತ್ರ ಪಾಠ್ಯಗಳನ್ನಾಗಿ ನಿಯಮಿಸುವುದರಿಂದ ಕೃತಿಯ ಸಮಗ್ರ ಪರಿಚಯವಾಗುವುದಿಲ್ಲ. ಇದು ಕವಿಗೆ ಅಪಚಾರ. ವಿಮರ್ಶೆಯ ದೃಷ್ಟಿಯಿಂದ ಅಸಮರ್ಪಕ, ಆದ್ದರಿಂದ ಹಿಂದಿನ ಮಹತ್ವದ ಕೃತಿಗಳನ್ನು ಮೂಲದ ಸ್ವರೂಪ ಸ್ಫುಟವಾಗುವಂತೆ ಸಂಗ್ರಹಿಸುವುದು, ವಿಮರ್ಶೆಗೆ ಅನುಕೂಲವಾಗುವಂತೆ ವಿಸ್ತಾರವಾದ ಪ್ರಸ್ತಾಪನೆಯೊಂದಿಗೆ ಪ್ರಕಟಿಸುವುದು ಕಾರ್ಯ ಧೋರಣೆಯಾಗಿತ್ತು. ಈ ಯೋಜನೆಯಿಂದಾಗಿ ಅನೇಕ ಹಳೆ–ನಡುಗನ್ನಡ ಕಾವ್ಯಗಳು ಪ್ರಚಾರಕ್ಕೆ ಬಂದವು. ಅಲ್ಲದೆ ಈ ಗ್ರಂಥ ಮಾಲೆ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗದೆ

ಜ್ಞಾನ, ವಿಜ್ಞಾನ, ಸಂಸ್ಕೃತಿ ಪ್ರಪಂಚಕ್ಕೆ ಸೇರಿದ ವಿಷಯಗಳನ್ನು ಕುರಿತು ಅವುಗಳ ಸ್ವರೂಪ ಪ್ರತಿಪಾದನೆಯನ್ನು ಅಧಿಕಾರಯುತವಾಗಿ ಮಾಡಬಲ್ಲವರಿಗೂ ತೆರೆದಿದ್ದರಿಂದ ಅನೇಕ ವಿಷಯಗಳನ್ನು ಕುರಿತು ಕನ್ನಡದಲ್ಲಿ ಬರೆಯಬಲ್ಲವರ ಒಂದು ಪಡೆಯೇ ನಿರ್ಮಾಣವಾಯಿತು. ಈ ಮಾಲೆಯಲ್ಲಿಯ ಅನೇಕ ಪ್ರಕಟನೆಗಳು ಪ್ರಮಾಣ ಗ್ರಂಥಗಳಾಗಿ ಜನಪ್ರಿಯವಾಗಿ ಉಳಿದಿವೆ ಎನ್ನುವುದು ನೆನೆಯಬೇಕಾದ ಸಂಗತಿಯಾಗಿದೆ. ಸ್ನಾತಕೋತ್ತರ ವ್ಯಾಸಂಗಕ್ಕೆ ಅವಕಾಶ ಮತ್ತು ಗ್ರಂಥಮಾಲೆಯ ಯೋಜನೆ ಕನ್ನಡದ ಪ್ರಸಾರಕ್ಕೆ ಅನುಕೂಲವಾದ ವಾತಾವರಣವನ್ನು ನಿರ್ಮಿಸಿದುವು. ಇದರ ಇನ್ನೊಂದು ಪರಿಣಾಮವೆಂದರೆ ವಿಶ್ವವಿದ್ಯಾನಿಲಯದಲ್ಲಿ ಪ್ರಸಾರಾಂಗದ ಯೋಜನೆ ರೂಪುಗೊಳ್ಳುವಂತಾಯಿತು. ಜ್ಞಾನ ಪ್ರಸಾರದ ಈ ಯೋಜನೆಯಲ್ಲಿ ವಿವಿಧ ವಿಷಯಗಳನ್ನು ಕುರಿತಂತೆ ಪ್ರಚಾರ ಪುಸ್ತಕಗಳು ಪ್ರಕಟವಾದವು. ಸುಲಭ ಬೆಲೆಯ ಈ ಯೋಜನೆಯನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದವರು ಜಿ. ಹನುಮಂತರಾಯರಾದರೂ ಮೂಲ ಪ್ರೇರಣೆಯನ್ನು ಒದಗಿಸಿದವರು ಅವರಿಗೆ ಗುರುಗಳಾಗಿದ್ದ ಶ್ರೀಕಂಠಯ್ಯನವರೇ. ಹೊಸ ಕೃತಿಗಳಿಗೆ ಉತ್ತೇಜನವೆಂಬ ದೃಷ್ಟಿಯಿಂದ ಸ್ವಂತದ ಒಂದು ದತ್ತಿಯನ್ನು ಏರ್ಪಡಿಸಿ ವರ್ಷದ ಉತ್ತಮ ಕಾವ್ಯರಚನೆಗೆ ಸುವರ್ಣ ಪದಕವೊಂದನ್ನು ಕೊಡುವ ಏರ್ಪಾಡನ್ನು ಮಾಡಿದರು. ಹತ್ತಾರು ಆಡಳಿತಗಳಿಗೆ ಒಳಪಟ್ಟಿದ್ದ ಕನ್ನಡ ನಾಡಿನಲ್ಲಿ ಬೇರೊಂದು ವಿಶ್ವವಿದ್ಯಾನಿಲಯವಿಲ್ಲದ್ದರಿಂದ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ನಡೆಯುವಂತಾದ ಈ ಕನ್ನಡದ ಕೆಲಸ ಅಖಿಲ ಕರ್ಣಾಟಕದ ದೃಷ್ಟಿಯಿಂದಲೂ ಹೆಚ್ಚಿನ ಮಹತ್ವದ್ದಾಯಿತು.

(3)

ಶ್ರೀಕಂಠಯ್ಯನವರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿ ಅಧಿಕಾರ ವಹಿಸಿಕೊಂಡ ವರ್ಷ ಒಂದು ಶುಭ ಸಂದರ್ಭವಾಗಿ, ಕನ್ನಡದ ಪುನರುಜ್ಜೀವನದ ಚರಿತ್ರೆಯಲ್ಲಿ ಒಂದು ಹೊಸ ಘಟ್ಟವಾಗಿ ಕಾಣುತ್ತದೆ. ಶ್ರೀಯವರ "ಇಂಗ್ಲಿಷ್ ಗೀತಗಳು" ಆ ವರ್ಷ ಪ್ರಕಟವಾಯಿತು. ಕನ್ನಡ ಕಾವ್ಯ ಪ್ರಪಂಚ

ವಲ್ಲಿ ಒಂದು ಹೊಸಯುಗವನ್ನೇ ತೆರೆಯಿತು. ಹಿಂದಿನ ಹನ್ನೆರಡು ಹದಿನಾಲ್ಕು ವರುಷ ಏಕಾಂತ ಅಧ್ಯಯನದಲ್ಲಿ ತೊಡಗಿ ಅನ್ಯಾದೃಶರಿರಾದ ಸಾಹಿತ್ಯ ಬೋಧಕರೆಂದು ಹೆಸರು ಪಡೆದಿದ್ದ ಶ್ರೀಕಂಠಯ್ಯನವರು ಕನ್ನಡದ ಪ್ರಚಾರಕ್ಕೆಂದು ಹೆಚ್ಚು ಹೆಚ್ಚಾಗಿ ಕನ್ನಡ ನಾಡಿನ ಸಂಚಾರಕ್ಕೆ ತೊಡಗಿದ ವರ್ಷ ಅದು. ಮಾತ್ರವಲ್ಲದೆ ಪ್ರಾಧ್ಯಾಪಕರ ಹೃದಯದಲ್ಲಿ ಹುದುಗಿದ ಸುಪ್ತಕಾವ್ಯ ಪ್ರತಿಭೆ "ಗದಾಯುದ್ಧಂ" ನಾಟಕದ ರೂಪದಲ್ಲಿ ಇಂಗ್ಲಿಶ್ ಗೀತೆಗಳ ರೂಪದಲ್ಲಿ ಪ್ರಕಟವಾದದ್ದಾದರೂ ಅದೇ ವರ್ಷ. ಶ್ರೀಕಂಠಯ್ಯನವರ ಸ್ವತಂತ್ರ ಬರವಣಿಗೆ ಯೆಲ್ಲವೂ ಮುಂದಿನ ಹತ್ತು ವರ್ಷಗಳ ಅವಧಿಯಲ್ಲಿ ನಡೆಯಿತು ಎನ್ನುವುದು ಗಮನಾರ್ಹವಾದ ಸಂಗತಿಯಾಗಿದೆ. ಇಂಗ್ಲಿಶ್ ಪ್ರಾಧ್ಯಾಪಕರಾಗಿದ್ದ ಪ್ರೊ. ಬಿ. ಎಂ. ಶ್ರೀಕಂಠಯ್ಯನವರು ಕನ್ನಡದ "ಶ್ರೀ" ಎಂದು ಹೊರಬಂದ ವರ್ಷ ೧೯೨೬. ಹಾಗೆ ಹೊರಬಂದು ಕನ್ನಡದ ಸಿರಿಯಾದರು. ಕನ್ನಡದ ಸಿರಿಯನ್ನು ಬೆಳೆಸಿದರು. ಬಿತ್ತರಿಸಿದರು.

"ಇಂಗ್ಲಿಶ್ ಗೀತಗಳು" ನಂತರ ೧೯೨೯ ರಲ್ಲಿ ಅವರ ಶ್ರೇಷ್ಠ ಕೃತಿಯಾದ "ಅಶ್ವತ್ಥಾಮನ್" ಪ್ರಕಟವಾಯಿತು. ಅವರ ಮೂರನೆಯ ನಾಟಕ "ಪಾರಸಿಕರು" ೧೯೩೫ರಲ್ಲಿ ಹೊರಬಂದಿತು. ಇದಾದನಂತರ ಸ್ವತಂತ್ರವಾಗಿ ಪೂರ್ಣಕೃತಿಯನ್ನು ಅವರು ಬರೆಯಲಿಲ್ಲ. ಕನ್ನಡದ ಕೈಪಿಡಿಗಾಗಿ ಛಂದಸ್ಸಿನ ಚರಿತ್ರೆಯನ್ನೂ ಕನ್ನಡ ಸಾಹಿತ್ಯ ಚರಿತ್ರೆಯ ಮೊದಲ ಭಾಗವನ್ನೂ ಬರೆದುಕೊಟ್ಟರು. ವಿಶೇಷ ಸಂದರ್ಭಗಳಿಗಾಗಿ ಆಗೀಗ ಬರೆದ ಪದ್ಯಗಳು ೧೯೪೩ರಲ್ಲಿ "ಹೊಂಗನಸುಗಳು" ಎಂಬ ಶೀರ್ಷಿಕೆಯಲ್ಲಿ ಪ್ರಕಟವಾದವು. ವಿದ್ಯಾವರ್ಧಕ ಸಂಘದಲ್ಲಿ ಮೊದಲು ಮಾಡಿದ ಭಾಷಣ. ೧೯೨೮ರಲ್ಲಿಯ ಕಲಬುರ್ಗಿಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ. ಮತ್ತೆ ಹಲವಾರು ಉಪನ್ಯಾಸಗಳು, ಮುನ್ನುಡಿಗಳು, ವಿಮರ್ಶೆಗಳು. ೧೯೩೮ ರಲ್ಲಿ "ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ" ಎಂಬ ಅರ್ಥಪೂರ್ಣವಾದ ತಲೆಬರಹವನ್ನು ಹೊತ್ತು ಪ್ರಕಟವಾದವು. ಅವರ ಒಟ್ಟು ಬರಹದ ಮೊತ್ತ ದೊಡ್ಡದಾಗಿರಲಿಲ್ಲ. ಆದರೆ ಅವರು ಬೀರಿದ ಪ್ರಭಾವ. ಒದಗಿಸಿದ ಪ್ರಚೋದನೆ, ನವೋದಯಕ್ಕೆ ಸ್ಪಷ್ಟವಾದ ದಿಕ್ಸೂಚಿಯಾದವು. ನೇರವಾದ ಉತ್ತೇಜಕಗಳಾದವು.

ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿಯ ಇಂಗ್ಲೀಶ್ ಇಲಾಖೆಯ ಕಾರ್ಯ
ವನ್ನು ಮೇಲ್ಪಡಿಸುವ ದೃಷ್ಟಿಯಿಂದ ಮೊದಲ ದರ್ಜೆಯ ಇಂಗ್ಲಿಶ್ ಪ್ರಾಧ್ಯಾಪ
ಕರೆಂದು ಬಡತಿ ಪಡೆದ ಶ್ರೀಕಂಠಯ್ಯನವರನ್ನು ಅಲ್ಲಿಗೆ ವರ್ಗಾಯಿಸಲಾಯಿತು.
ಇಂಗ್ಲೀಶನ್ನು ಪ್ರಧಾನ ಐಚ್ಛಿಕ ವಿಷಯವಾಗಿ ತೆಗೆದುಕೊಳ್ಳುವಂತೆ ಏರ್ಪಾಡು
ಮಾಡಿದ್ದರೂ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದ ಶ್ರೀಕಂಠಯ್ಯ
ನವರಿಗೆ ಅಲ್ಲಿಯ ಕೆಲಸ ಒಂದು ಹೊರೆಯಾಗಲಿಲ್ಲ. ಮೈಸೂರಿನಲ್ಲಿದ್ದಾಗ
ಪ್ರಾರಂಭಿಸಿದ ಸ್ಟಡಿ ಸರ್ಕಲ್‌ಗೆ ಸರಿಸಮನಾಗಿ, (ಆದರೆ ವ್ಯಾಪ್ತಿಯನ್ನು
ವ್ಯಾಸಂಗ ವಿಷಯಗಳಿಗೆ ಮಾತ್ರ ಪರಿಮಿತವಾಗಿಸದೆ,) "ಇಂಗ್ಲೀಶ್ ಸೆಮಿನಾರ್"
ಎಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ಹೆಸರು ಒಂದು ಬಗೆಯ ಮಿತಿ
ಯನ್ನು ಸೂಚಿಸಿದರೂ ಸಂಸ್ಥೆಯ ಉದ್ದೇಶ, ವ್ಯಾಸಂಗವಿಸ್ತರಣ, ಮಾನವ
ಸಂಸ್ಕೃತಿಗೆ ಸಂಬಂಧಪಟ್ಟ ವಿಷಯಗಳ ಅಧ್ಯಯನ, ಪರಿಶೀಲನ, ಚರ್ಚೆ,
ಅಭಿಪ್ರಾಯ ರೂಪಣ, ಎಂದು ಬಹು ವಿಧವಾಗಿ ವಿಸ್ತರಿಸಿತ್ತು. ವಿದ್ಯಾರ್ಥಿ
ಅಧ್ಯಾಪಕರಿಬ್ಬರಿಗೂ ತೆರೆದಿದ್ದ ಈ ಚರ್ಚೆಗಳು ಪಾಠಕ್ರಮದ ಪರಿಮಿತಿಗಳಿಂದ
ದೂರವಾಗಿ ಯಾವ ಯಾವುದರಿಂದ ಆಲೋಚನೆ ವಿಸ್ತರಿಸಬಹುದು, ವಿಮರ್ಶೆಯ
ವಿವೇಕ ಬೆಳೆದು ಧರ್ಮ, ನೀತಿ, ಶಾಸ್ತ್ರ, ಸಾಹಿತ್ಯ ಎಂಬೆಲ್ಲ ವಿಚಾರಗಳ
ಲ್ಲಿಯೂ ಒಂದು ಸಮತೂಕದ ದೃಷ್ಟಿಯನ್ನು ತಂದುಕೊಡಬಹುದೋ ಅಂಥ
ವ್ಯಾಪ್ತಿಯುಳ್ಳವಾಗಿರುತ್ತಿದ್ದವು. ಪ್ರಾಸ್ತಾವಿಕವಾಗಿ ಶ್ರೀಕಂಠಯ್ಯನವರು
ವಿಷಯ ಪ್ರವೇಶವನ್ನು ಮಾಡಿಕೊಟ್ಟ ಮೇಲೆ ಮೂರು ನಾಲ್ಕು ಜನ ಮೊದಲೇ
ಗೊತ್ತುಪಡಿಸಲಾಗಿದ್ದ ಗ್ರಂಥವನ್ನು ಕುರಿತು ಮಾತನಾಡುತ್ತಿದ್ದರು. ಕೊನೆ
ಯಲ್ಲಿ ಶ್ರೀಕಂಠಯ್ಯನವರು ವಿಷಯವನ್ನು ಸಮಗ್ರವಾಗಿ ಪರಿಶೀಲಿಸಿ ಸಮಾ
ರೋಪ ಮಾಡುತ್ತಿದ್ದರು. ಅವರ ಸಮಾರೋಪ ಭಾಷಣಗಳ ವಿಚಾರ
ವಿಲಾಸವನ್ನು ಅವನ್ನು ಕೇಳಿದವರು ಇಂದಿಗೂ ನೆನೆದುಕೊಳ್ಳುತ್ತಾರೆ. ಅಲ್ಲಿ
ಚರ್ಚಿಸಲಾದ ವಿಷಯಗಳ ವೈವಿಧ್ಯ ಅವರ ವಿವಿಧ ಆಸಕ್ತಿಗಳನ್ನಲ್ಲದೆ ಅವರ
ವಿಸ್ತಾರವಾದ ವಿದ್ವತ್ತನ್ನೂ ಎತ್ತಿತೋರಿಸುತ್ತವೆ.

ಶ್ರೀಕಂಠಯ್ಯನವರ ವಿದ್ವತ್ತು ವಿಸ್ತಾರವಾಗಿದ್ದಷ್ಟೂ ಆಳವಾಗಿತ್ತು.
ಮನುಷ್ಯನ ಮನಸ್ಸನ್ನು ಒಳ್ಳೆಯದರತ್ತ ಒಲಿಯುವಂತೆ ಸಂಸ್ಕರಿಸಬಲ್ಲ

ಯಾವುದೂ ಅವರ ಆಸಕ್ತಿ-ಆಲೋಚನೆಗಳಿಗೆ ಹೊರತಾಗಿರಲಿಲ್ಲ. ಸಾಹಿತ್ಯದ ಪ್ರಾಧ್ಯಾಪಕರಾಗಿದ್ದರೂ ಸಾಹಿತ್ಯ ಒಂದೇ ಅವರ ಅಧ್ಯಯನದ ವಿಷಯವಾಗಿರಲಿಲ್ಲ. ನ್ಯಾಯ ನೀತಿಗಳ ವಿಚಾರ, ಧರ್ಮಶಾಸ್ತ್ರದ ಹಲವಾರು ಬಗೆಗಳು, ಪುರಾಣೇತಿಹಾಸಗಳು, ಮನುಷ್ಯನ ನಿಷ್ಠೆ ನಂಬಿಕೆಗಳನ್ನು ರೂಪಿಸಿದ ಎಲ್ಲ ಸಂಗತಿಗಳು ಅವರಿಗೆ ಆಹಾರ್ಯವಾಗಿದ್ದುವು. ಅವರಷ್ಟು ವಿಚಕ್ಷಣೆಯಿಂದ ಆ ಮೂಲಾಗ್ರವಾಗಿ ಇಂಗ್ಲಿಷ್ ಸಾಹಿತ್ಯವನ್ನು ಓದಿದವರು ತೀರ ಅಪರೂಪ. ಅದಕ್ಕೆ ಒತ್ತಿಲೆಯಾಗಿ ಗ್ರೀಕ್ ಸಾಹಿತ್ಯವನ್ನು, ವಿಶೇಷವಾಗಿ ಗ್ರೀಕ್ ನಾಟಕ ಸಾಹಿತ್ಯವನ್ನು, ಮೂಲದಲ್ಲಿಯೇ ಓದಿಕೊಂಡಿದ್ದರು. ಕನ್ನಡದೊಡನೆ ಪ್ರಾಚೀನ ಸಂಬಂಧವನ್ನು ಹೊಂದಿದ್ದ ತಮಿಳು ಭಾಷೆಯ ವ್ಯಾಕರಣ ಛಂದಸ್ಸುಗಳನ್ನು ಕೂಲಂಕಷವಾಗಿ ತಿಳಿದುಕೊಂಡಿದ್ದರು. ವಿಷಯ ಯಾವುದಾದರೂ ಅದನ್ನು ತಲಸ್ಪರ್ಶಿಯಾಗಿ ತಿಳಿದುಕೊಳ್ಳದೆ ಅವರು ಮುಂದುವರಿಯುತ್ತಿದ್ದಿಲ್ಲ. ಹಳಗನ್ನಡದಿಂದ ಇಂದಿನವರೆಗಿನ ಹಿರಿಯ ಕವಿಗಳ ಕೃತಿಗಳೆಲ್ಲವನ್ನೂ ಆಮೂಲಾಗ್ರವಾಗಿ ಓದಿಕೊಂಡಿದ್ದರಲ್ಲದೆ ಅವರ ಆಸಕ್ತಿ ಕೇವಲ ಸಾಹಿತ್ಯದ ದೃಷ್ಟಿಯ ರಸಾಸ್ವಾದನೆಗೆ ಮಾತ್ರ ಸೀಮಿತವಾಗಿರದೆ ರಸನಿಷ್ಪತ್ತಿಗೆ ಪೋಷಕವಾಗಿ ಕೆಲಸ ಮಾಡುವ ಪರಿಕರಗಳ ವಿವರವಾದ ವಿಶ್ಲೇಷಣೆಗಳವರೆಗೂ ವಿಸ್ತರಿಸಿತ್ತು. ವಿಶ್ವವಿದ್ಯಾನಿಲಯದಲ್ಲಿ ಅವರು ಕನ್ನಡ ಪಾಠ ಮಾಡುತ್ತಿದ್ದಾಗ ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿಗಳಂಥವರಿಗೆ ಡಿಗ್ರಿ ತರಗತಿಗಳಲ್ಲಿ ಸಾಹಿತ್ಯ, ಚರಿತ್ರೆ, ಭಾಷೆಯ ಚರಿತ್ರೆ ತೌಲನಿಕ ವ್ಯಾಕರಣ, ದ್ರಾವಿಡ ಛಂದಸ್ಸು ಮುಂತಾದ ವಿಷಯಗಳನ್ನು ಬೋಧಿಸುತ್ತಿದ್ದರೆಂದಮೇಲೆ ಅವರ ವಿದ್ವತ್ತಿನ ಆಳ ವಿಸ್ತಾರಗಳನ್ನು ಕುರಿತು ಹೆಚ್ಚಿಗೆ ಹೇಳಬೇಕಾದದ್ದಿಲ್ಲ.

ಈ ವಿದ್ವತ್ತಿನ ಸಾರಸಂಗ್ರಹವೆಲ್ಲ ಅವರ ಪಾಠಪ್ರವಚನಗಳಲ್ಲಿ ವಿನಿಯೋಗವಾಗುತ್ತಿತ್ತು. ಅದನ್ನು ಕೇಳುವ ಅವಕಾಶವನ್ನು ಪಡೆದ ವಿದ್ಯಾರ್ಥಿಗಳು ಇಂದಿಗೂ ಆ ಅನುಭವವನ್ನು ಧನ್ಯತೆಯಿಂದೆಂಬಂತೆ ನೆನೆದುಕೊಳ್ಳುತ್ತಾರೆ. ಸಾರ್ವಜನಿಕ ಭಾಷಣಗಳಲ್ಲಿ ಅವರ ವಾಗ್ವೈಭವದ ವಿಜೃಂಭಣೆಯನ್ನು ಕಾಣಬಹುದಾಗಿತ್ತಾದರೆ ತರಗತಿಯಲ್ಲಿಯ ಅವರ ಮಾತುಗಳು ಸಾಹಿತ್ಯದ ರಸಾನುಭವಕ್ಕೆ ಪೋಷಕವಾದ ರೀತಿಯವಾಗಿರುತ್ತಿದ್ದುವು ಕಾವ್ಯವೊಂದನ್ನು ಓದುವಾಗ,

ಪಾಠ ಹೇಳುವಾಗ, ಅದರೊಡನೆ ತನ್ಮಯರಾಗಿ, ಅದರ ಸಂತೋಷವನ್ನು ತಾವೇ ಅನುಭವಿಸುತ್ತಿದ್ದವರ ವಿವರಣೆಯ ರೀತಿ ಅವರದಾಗಿರುತ್ತಿತ್ತು. ಯಾವ ಅಡೆತಡೆಗಳಿಗೂ ಅಲ್ಲಿ ಅವಕಾಶವಿರುತ್ತಿರಲಿಲ್ಲ. ಸಹೃದಯರಾದ ವಿದ್ಯಾರ್ಥಿಗಳಿಗೆ ಬೇರೊಂದು ಪ್ರಪಂಚದಲ್ಲಿ ವಿಹರಿಸುತ್ತಿದ್ದ ಅನುಭವವಾಗುತ್ತಿತ್ತು. ಪಾಠದ ವಿಷಯ ಯಾವುದಾದರೂ ಅದನ್ನು ಸಮಗ್ರವಾಗಿ ವಿಶ್ಲೇಷಿಸಿ ವಿವರಿಸುವುದು ಅವರ ಪಾಠ ಕ್ರಮದ ವಿಶೇಷವಾಗಿತ್ತು. ಕೃತಿಯ ಹಿನ್ನೆಲೆ, ಚಾರಿತ್ರಿಕ ಸನ್ನಿವೇಶ, ಬರೆದವನ ಬದುಕು, ಅದಕ್ಕೂ ಕೃತಿಗೂ ಇದ್ದಿರಬಹುದಾದ ಸಂಬಂಧ, ಕೃತಿಯ ರೂಪ ರಚನೆ: ಆಯಾಯ ಪ್ರಕಾರದ ಉಗಮ ಬೆಳವಣಿಗೆಗಳು, ಎಂದು ವಿಸ್ತಾರವಾಗಿ ಸಂಬಂಧಿಸಿದ ವಿವರಗಳನ್ನೆಲ್ಲ ತಿಂಗಳುಗಟ್ಟಲೆ ಹೇಳಿಯಾದ ಮೇಲೆ ಕೃತಿಯ ವಿವರಣೆಗೆ ತೊಡಗುತ್ತಿದ್ದರು. ಆ ವಿವರಣೆಯಾದರೂ ಒಂದು ರಸಾನುಭವದ ಪ್ರಪಂಚ. ಹೃದಯ ಸಂವಾದದ ಒಂದು ಬಗೆ ಎನ್ನುವಂತಿರುತ್ತಿತ್ತು. ಮಾಡಬೇಕಾದ ಪಾಠ ಕವನ ಸಂಗ್ರಹವಾಗಿದ್ದಾಗ ಅಲ್ಲಿಯ ಪದ್ಯಗಳನ್ನು ವಿಷಯ ಅಥವಾ ರೀತಿಗಳಿಗೆ ಅನುಸಾರವಾಗಿ ವಿಂಗಡಿಸಿಕೊಂಡು ಒಂದೊಂದು ಬಗೆಯೂ ಯಾವ ಯಾವ ರೀತಿಯಲ್ಲಿ ಬೆಳೆದು ಭಾವ ಪ್ರಕಾಶನವನ್ನು ಸಾಧಿಸುತ್ತದೆ ಎಂಬೆಲ್ಲ ವಿವರಣೆ ಅಸ್ವಾದ್ಯಕರವಾದದ್ದೆಂದು ಅವರ ವಿದ್ಯಾರ್ಥಿಗಳು ಇಂದಿಗೂ ನೆನೆದುಕೊಳ್ಳುತ್ತಾರೆ. ರಸಾನುಭವದ ಅವರ ಸಾಮರ್ಥ್ಯ ತೀವ್ರವಾಗಿತ್ತು; ಅದನ್ನು ಇನ್ನೊಬ್ಬರಿಗೆ ತಿಳಿಸಬಲ್ಲ ವಾಕ್ ಸಾಮರ್ಥ್ಯ ಅವರದಾಗಿತ್ತು. ಇವೆರಡೂ ಸೇರಿ ಅವರ ಪಾಠಪ್ರವಚನಗಳನ್ನು ಅವಿಸ್ಮರಣೀಯವಾಗಿಸುತ್ತಿದ್ದವು.

ಶಾಸ್ತ್ರ ವಿಷಯಗಳ ಪಾಠಕ್ರಮ ಬೇರೆಯಾಗಿರಬಲ್ಲದು. ಅಲ್ಲಿ ಎಲ್ಲವೂ ಖಚಿತವಾಗಿರುವುದರಿಂದ ವಿವರಣೆಯೂ ನಿಖರವಾಗಿರಬೇಕಾಗುತ್ತದೆ. ಆದರೆ ಸಾಹಿತ್ಯ ಪಾಠ ಮನುಷ್ಯನ ಭಾವ ಪ್ರಪಂಚಕ್ಕೆ ಸೇರಿದ್ದು. ಅಲ್ಲಿಯ ವೈವಿಧ್ಯ ವಿಲಾಸಗಳು ಒಂದು ಚೌಕಟ್ಟಿಗೆ ಒಳಪಟ್ಟು ನಿಲ್ಲಲಾರವು. ಇಂಥ ಪಾಠಕ್ರಮಕೆ ಬೇಕಾದದ್ದು ಪಾಂಡಿತ್ಯಕ್ಕಿಂತ ಹೆಚ್ಚಾಗಿ ಸಾಹಿತ್ಯದ ಬಗೆಯಲ್ಲಿಯ ಉತ್ಸಾಹ ಅಂಥ ಉತ್ಸಾಹವನ್ನು ವಿದ್ಯಾರ್ಥಿಗಳಲ್ಲಿ ಮೂಡಿಸುವ ಸಾಮರ್ಥ್ಯದ, ಜೊತೆಗೆ ಅವರಲ್ಲಿ ಪಾಂಡಿತ್ಯವೂ ಇದ್ದಿತು. ಇದಕ್ಕೆ ಸಮನಾಗಿರಿ ತಾವು ಅನುಭವಿಸಿದ್ದನ್ನು

ಇನ್ನೊಬ್ಬರ ಅನುಭವವಾಗುವಂತೆ ವಿವರಿಸಬಲ್ಲ ವಾಕ್‌ಶಕ್ತಿಯೂ ಇದ್ದಿತು. ಅಷ್ಟಲ್ಲದೆ ಅವರ ಪ್ರವಚನಕ್ಕೆ ಪ್ರಸ್ತುತ ಗ್ರಂಥವೇ ಪರಮಾಧಿಕಾರ. ಬೇರೆ ವಿಮರ್ಶಕರ ಅಭಿಪ್ರಾಯಗಳಲ್ಲ. ವಿದ್ಯಾರ್ಥಿಗಳು ಓದಬೇಕಾದದ್ದು ಮೂಲಕೃತಿಯನ್ನಲ್ಲದೆ ಕೃತಿಯ ಬಗೆಯಲ್ಲಿಯ ಕೃತಿಗಳನ್ನಲ್ಲ. ಇದರರ್ಥ ಬೇರೆ ವಿಮರ್ಶಕರ ಅಭಿಪ್ರಾಯಗಳನ್ನು ಅವರು ತಿಳಿದಿರುತ್ತಿರಲಿಲ್ಲವೆಂದಲ್ಲ. ಅಂಥವುಗಳ ಬಗ್ಗೆ ಅಸಡ್ಡೆ ಎಂದೂ ಅಲ್ಲ. ಬಂದ ಎಲ್ಲ ವಿಮರ್ಶೆಗಳನ್ನೂ ಅವರು ಓದಿರುತ್ತಿದ್ದರು. ಆದರೆ ಎಲ್ಲಕ್ಕೂ ಮಿಗಿಲಾಗಿ ಸ್ವಂತದ ಪ್ರತಿಕ್ರಿಯೆ ಮುಖ್ಯವಾಗಿ ಕಾಣುತ್ತಿತ್ತು. ಕೃತಿಯೊಂದನ್ನು ನಾವು ಕಾಣಬೇಕಾದದ್ದು ನಮ್ಮ ಕಣ್ಣುಗಳಿಂದ : ಇನ್ನೊಬ್ಬರ ಕಣ್ಣುಗಳಿಂದಲ್ಲ ಎನ್ನುವುದನ್ನು ವಿದ್ಯಾರ್ಥಿಗಳು ತಿಳಿದಿರಬೇಕು ಎನ್ನುವುದು ಅವರ ಪಾಠಕ್ರಮದ ಧೋರಣೆಯಾಗಿರುತ್ತಿತ್ತು.

ಅವರ ವಿದ್ವತ್ತು ಮತ್ತು ಉತ್ಸಾಹ ಎರಡೂ ಸೇರಿ ಅವರ ಪಾಠಕ್ರಮ ವಿಸ್ತರಿಸುವಂತೆ ಮಾಡುತ್ತಿದ್ದವು. ಒಂದೊಂದು ಸಲ ಪಾಠ ಗಂಟೆಗಟ್ಟಲೆ ಮುಂದುವರಿಯುತ್ತಿತ್ತು. ಕೇವಲ ಪರೀಕ್ಷೆಗಾಗಿ ಓದುವವರಿಗೆ, ಹೆಚ್ಚಿನ ಉತ್ಸಾಹವಿಲ್ಲದವರಿಗೆ, ಏನೇನೋ ಹೇಳುತ್ತಿದ್ದಾರೆ ಎಂಬ ಭಾವನೆಯುಂಟಾಗುತ್ತಿತ್ತು. ಹಾಗೆ ಮೇಲಧಿಕಾರಿಗಳವರೆಗೆ ದೂರು ಹೋದದ್ದೂ ಇತ್ತು. ಅದಕ್ಕೆ ಶ್ರೀಕಂಠಯ್ಯನವರು ವಿದ್ಯಾರ್ಥಿಗಳ ಮನಸ್ಸುಗಳನ್ನು ಸಂಸ್ಕರಿಸಬೇಕಾದದ್ದು ನಮ್ಮ ಕಾರ್ಯವೇ ಹೊರತು ಪರೀಕ್ಷೆಗಾಗಿ ತಯಾರು ಮಾಡುವುದಲ್ಲ ಎಂದು ಹೇಳುತ್ತಿದ್ದರು. ಪಾಂಡಿತ್ಯದ ಜೊತೆಯಲ್ಲಿ ರಸಾನುಭವದ ಸಾಮರ್ಥ್ಯವೂ ಅವರದಾಗಿದ್ದುದರಿಂದ ಅವರು ಕಾವ್ಯವನ್ನು ಓದುವ ರೀತಿಯಿಂದಲೇ ಅದರ ಅರ್ಥವನ್ನು, ಭಾವಸೂಕ್ಷ್ಮಗಳನ್ನು ವ್ಯಕ್ತಪಡಿಸಬಲ್ಲವರಾಗಿದ್ದರು. ಅಭಿನಯದ ಆಡಂಬರವಿಲ್ಲದೆ ದನಿಯ ಸೂಕ್ಷ್ಮವಾದ ಏರಿಳಿತಗಳಿಂದಲೇ ಕವಿತೆಯ ಜೀವಾಳವನ್ನು ಹೊರಗೆಡಹುತ್ತಿದ್ದರು. ಅವರು ಓದಿದ್ದನ್ನು ಕೇಳಿದ ಮೇಲೆ ಅದನ್ನು ಮರೆಯುವುದಸಾಧ್ಯ ಎಂದು ಅನೇಕರು ಇಂದಿಗೂ ನೆನೆಯುತ್ತಾರೆ. ಅವರ ಪಾಠಕ್ರಮದಲ್ಲಿ ಇನ್ನೊಂದೆರಡು ವಿಶೇಷಗಳೆಂದರೆ ತರಗತಿಗೆ ಅವರು ಎಂದಿಗೂ ತಡಮಾಡಿ ಹೋಗುತ್ತಿದ್ದಿಲ್ಲ. ತಪ್ಪಿಸುವುದಂತೂ ದೂರವೇ. ಹೆಂಡತಿ ತೀರಿದ ಮರುದಿನವೂ ಅವರು ಪಾಠ ಮಾಡುವುದನ್ನು ಬಿಡಲಿಲ್ಲವಂತೆ. ಒಂದು ಸಲ

ಕೈಮೂಳೆ ಮುರಿದಾಗಲೂ ತರಗತಿಗಳನ್ನು ತಪ್ಪಿಸಲಿಲ್ಲ. ಅಷ್ಟಲ್ಲದೆ, ಹತ್ತು ಬಾರಿ ಹೇಳಿದ ಪಾಠವಾದರೂ ಅಂದಂದಿನ ಪಾಠವನ್ನು ಬೆಳಗಿನಲ್ಲಿ ಮತ್ತೊಮ್ಮೆ ನೋಡಿಕೊಳ್ಳದ ಹೊರತು ಅವರು ತರಗತಿಗೆ ಹೋದದ್ದಿಲ್ಲ. ಇವೆಲ್ಲವೂ ಹೊಸ ತಲೆಮಾರಿನ ಅಧ್ಯಾಪಕರು ಗಮನಿಸಬೇಕಾದ ಅಂಶಗಳು. ವಿದ್ಯಾರ್ಥಿಗಳಿಗೆ ಪಾಠ ಹೇಳುವುದು ಹೇಗಾದರೂ ಮಾಡಿ ಮುಗಿಸಬೇಕಾದ ಕೆಲಸಗಿರಲಿಲ್ಲ ಅವರ ಪಾಲಿಗೆ. ಹೊಣೆಗಾರಿಕೆಯಿಂದಲ್ಲದೆ ಪ್ರೀತಿಯಿಂದ ಮಾಡಬೇಕಾದ ಕೆಲಸ ಎಂಬ ಭಾವನೆಯಿಂದಲೇ ಅವರು ವಿದ್ಯಾಪ್ರಸಾರದ ಕಾರ್ಯದಲ್ಲಿ ತೊಡಗುತ್ತಿದ್ದರು. ಅಂಥವರ ಮೂಲಕವೇ ಸಾವಿರಾರು ವಿದ್ಯಾರ್ಥಿಗಳ ಸ್ಮರಣೆಯಲ್ಲಿ ಅಮರವಾಗಿ ಉಳಿದಿದ್ದರೆನ್ನುವುದರಲ್ಲಿ ಆಶ್ಚರ್ಯವಿಲ್ಲ. ಅಧ್ಯಾಪಕನಾದವನಿಗೆ ಇದು ಪರಮಾವಧಿಯ ಕೃತಾರ್ಥತೆ. ಇಂಥ ಕೃತಾರ್ಥತೆ ಶ್ರೀಕಂಠಯ್ಯನವರದಾಗಿತ್ತು.

ಶ್ರೀಕಂಠಯ್ಯನವರಿಗೆ ಷೇಕ್ಸ್‌ಪಿಯರ್ ಅಚ್ಚುಮೆಚ್ಚಿನ ಕವಿ. ಆತನ ಕೃತಿಗಳಲ್ಲಿಯ ಕಾವ್ಯಸತ್ವ, ಜೀವನಾನುಭವದ ವಿಸ್ತಾರ, ಆತನ ಕಲೆಯ ಅರ್ಥವಂತಿಕೆ ಇಷ್ಟು ಎಂದು ಹೇಳಿ ಮುಗಿಸಬಹುದಾದ್ದಲ್ಲ: ಆತ ಒಂದು ಕಾಲಕ್ಕೆ ಸೇರಿದವನಲ್ಲ: ಒಂದು ದೇಶಕ್ಕೆ ಸೇರಿದವನಲ್ಲ: ಎಲ್ಲಿಯೂ ಯಾವಾಗಲೂ ಸಲ್ಲುವ ಶುದ್ಧ ಕಾವ್ಯ ಪ್ರತಿಭೆಯ ಮೂರ್ತರೂಪ ಆತ ಎನ್ನುತ್ತಿದ್ದರು, ಗೌರವಿಸುತ್ತಿದ್ದರು. ಅವನ ತರುವಾಯ ಅವರಿಗೆ ಪ್ರಿಯರಾಗಿದ್ದ ಇಂಗ್ಲಿಷ್ ಕವಿಗಳೆಂದರೆ ವರ್ಡ್ಸ್‌ವರ್ತ್, ಬ್ರೌನಿಂಗ್ ಮತ್ತು ಆರ್ನಾಲ್ಡ್. ಈ ಮೂವರ ಕೃತಿಗಳು ಅವರ ಅಂತರ್ಯದಲ್ಲಿಯ ಆಳವಾದ ಆಧ್ಯಾತ್ಮಿಕ ಚಿಂತನದ ತಂತಿಗಳನ್ನು ಮೀಟುತ್ತಿದ್ದವು. ವರ್ಡ್ಸ್‌ವರ್ತ್‌ನಂತೆಯೆ ನಿಸರ್ಗದಲ್ಲಿಯ ಚೆಲುವು ಅವರನ್ನು ಪ್ರೇಮರೆಯಿಸುತ್ತಿತ್ತು. ಬಾಹ್ಯವಿಷಾರಗಳ ಹಿಂದಿನ ನಿಗೂಢ ಸತ್ವವನ್ನು ಕುರಿತು ಚಿಂತನೆಗೆ ತೊಡಗಿಸುತ್ತಿತ್ತು. ಗೆಲುವು ನಮ್ಮ ಕೈಯಲ್ಲಿಯದಲ್ಲ: ನಿಯತ ನಿಷ್ಠೆ ಮತ್ತು ಸತತ ಪ್ರಯತ್ನ ಮಾತ್ರ ನಮ್ಮ ಕೈಯಲ್ಲಿಯವು ಎಂದು ನಂಬಿದ್ದ ಅವರಿಗೆ ಬ್ರೌನಿಂಗನ ಧ್ಯೇಯ, ನಿಷ್ಠೆ ಪ್ರಿಯವಾಗಿತ್ತು. ಸಣ್ಣ ಗುರಿಯನ್ನಿರಿಸಿಕೊಂಡು ಗೆಲ್ಲುವುದಕ್ಕಿಂತ ದೊಡ್ಡ ಗುರಿಯನ್ನಿರಿಸಿಕೊಂಡು ಸೋಲುವುದು ಮೇಲು ಎಂದು ಅವನಂತೆ ಇವರೂ ನಂಬಿದ್ದರು. ಆಧ್ಯಾತ್ಮಿಕ

ವಾಗಿ ಒಂದು ನೆಲೆಯನ್ನು ತಲುಪಬೇಕಾದಾಗ ಅವರು ಅನುಭವಿಸಿರಬಹುದಾದ ಅಂತರಂಗದ ಕಳವಳ ಅವರಿಗೆ ಅರ್ನಾಲ್ಡ್‌ನನ್ನು ಹತ್ತಿರವಾಗಿಸಿತ್ತು. ಮನುಷ್ಯನ ಬದುಕನ್ನು ಆವರಿಸಿರುವ ಅನಂತ ಏಕಾಂತದ ಭಾವನೆಯನ್ನು, ನಿರಂತರವಾಗಿ ಪರಿಪೂರ್ಣತೆಯೆಡೆಗೆ ಸಾಗುತ್ತಿರಬೇಕೆಂಬ ಆಕಾಂಕ್ಷೆಯನ್ನು ಅರ್ನಾಲ್ಡ್‌ನಲ್ಲಿಯಂತೆ ತಮ್ಮ ಹೃದಯದಲ್ಲಿಯೂ ಅವರು ಗುರುತಿಸಿದ್ದರು. ಕಾವ್ಯದ ರಸಾನುಭವ ಅವರಲ್ಲಿ ಒಂದೊಂದು ಬಗೆಯ ಆಧ್ಯಾತ್ಮಿಕ ಅನುಭವವಾಗಿ, ಕಾಣ್ಕೆಯಾಗಿ, ಪರ್ಯವಸಾನವಾಗುತ್ತಿತ್ತು.

ಶ್ರೀಕಂಠಯ್ಯನವರ ಮಾತು ಬಂದಾಗಲೆಲ್ಲ ಎಲ್ಲರೂ ಮೊದಲು ನೆನೆಯುವುದು ಅವರ ಭಾಷಣಗಳನ್ನು. ಅವುಗಳಲ್ಲಿ ಮೆರೆಯುತ್ತಿದ್ದ ವಾಗ್ವಿಲಾಸವನ್ನು. ಅತ್ಯುತ್ತಮ ದರ್ಜೆಯ ವಾಗ್ಮಿಗಳೆಂಬ ಕೀರ್ತಿ ಅವರದಾಗಿತ್ತು. ಅವರ ಭಾಷಣವನ್ನು ಕೇಳುವುದಕ್ಕೆ ಜನಗಳು ಗಂಟೆಗಟ್ಟಲೆ ಕಾಯುತ್ತಿದ್ದರು. ನಡುರಾತ್ರಿಯಾದರೂ ಸರಿ, ಬಂದು ಸೇರುತ್ತಿದ್ದರು. ಷೇಕ್ಸ್‌ಪಿಯರನನ್ನು ಕುರಿತ ಅವರ ಭಾಷಣಗಳಂತೂ ವಾಗ್ಮಿತೆಯ ಪರಮೋಚ್ಚ ಸಿದ್ಧಿಗಳಾಗಿ ಪರಿಣಮಿಸುತ್ತಿದ್ದವು. ಇಂಗ್ಲಿಷಿನಲ್ಲಿ ಹೇಗೋ ಹಾಗೆ ಕನ್ನಡದಲ್ಲಿ, ಕನ್ನಡದಲ್ಲಿ ಹೇಗೋ ಹಾಗೆ ಇಂಗ್ಲಿಷಿನಲ್ಲಿ, ಅವರ ವಾಕ್ಪ್ರವಾಹ ನಿರರ್ಗಳವಾಗಿ, ಅಸ್ಖಲಿತವಾಗಿ, ಲಲಿತಮನೋಹರವಾಗಿ ಮುಂದುವರಿಯುತ್ತಿತ್ತು. ಅಂಥ ವಾಕ್ಪ್ರಭುತ್ವ ಒಂದು ದೈವದತ್ತ ವರ. ಕನ್ನಡ ಇಂಗ್ಲಿಷ್‌ಗಳೆರಡರಲ್ಲಿಯೂ ಅಂಥ ಪ್ರಭುತ್ವವನ್ನು ಪಡೆದವರು, ಎರಡು ಗಂಟೆ, ಮೂರು ಗಂಟೆ ಸಭಿಕರನ್ನು ಒಂದು ಬಗೆಯ ಸಮ್ಮೋಹನಕ್ಕೆ ಒಳಪಡಿಸಿ ಸೆರೆಹಿಡಿಯಬಲ್ಲವರು ತೀರ ಅಪರೂಪ. ಇಲ್ಲವೆಂದರೂ ಆದೀತು. ಅಂಥ ವಾಕ್ಪರಿಣತಿ ಅವರದಾಗಿತ್ತು.

ಭಾಷಣಗಳಿಗಾಗಿ ವಿಷಯದ ಕೊರತೆ ಅವರಿಗಿರಲಿಲ್ಲ. ಸಾಹಿತ್ಯವೊಂದೇ ಅವರ ಆಸಕ್ತಿಯ ವಿಷಯವಾಗಿರಲಿಲ್ಲ ಎನ್ನುವುದನ್ನು ನೋಡಿಯಾಗಿದೆ. ಕನ್ನಡವಾದ ಮೇಲೆ ಅನೇಕ ಸಲ ಬೇರೆಯಾಗಿ ಇಂಗ್ಲಿಷ್‌ನಲ್ಲಿಯೂ ಮಾತನಾಡಬೇಕಾಗುತ್ತಿತ್ತು. ಆಯ್ದುಕೊಂಡ ವಿಷಯ ಯಾವುದೇ ಆಗಲಿ, ಕಾವ್ಯವೇ ಆಗಲಿ, ನಾಟಕವೇ ಆಗಲಿ, ಯಾವ ಕೃತಿಯೇ ಆದರೂ ಸಮಗ್ರವಾಗಿ ಅವರ

ತುದಿ ನಾಲಗೆಯ ಮೇಲೆಯೇ ಇದ್ದಂತೆ ಲೀಲಾಜಾಲವಾಗಿ ಪಂಕ್ತಿಗಳನ್ನು ಉದ್ಧರಿಸಿಕೊಂಡು ವಿವರಣೆಯೊಂದಿಗೆ ಹೋಗುವ ಅವರ ರೀತಿ ವಿಸ್ಮಯ ಕಾರಿಯಾಗಿರುತ್ತಿತ್ತು. ಅಂದಂದಿನ ಸನ್ನಿವೇಶಕ್ಕೆ ತಕ್ಕಂತೆ ವಿಷಯವನ್ನು ಆಯ್ದು ಕೊಳ್ಳುತ್ತಿದ್ದರು. ಯಾವುದೂ ಪೂರ್ವನಿರ್ಧಾರಿತವಾಗಿರದಿದ್ದರೂ ವಿಷಯವನ್ನು ಗೊತ್ತು ಮಾಡಿಕೊಂಡ ಮೇಲೆ ಅದನ್ನು ಮನಸ್ಸಿನಲ್ಲಿ ತಿರುವಿ ಹಾಕಿ ಅಲ್ಲಿಯೇ ಮುಖ್ಯಾಂಶಗಳನ್ನು ಗುರುತು ಹಾಕಿ ಕೊಳ್ಳುತ್ತಿದ್ದರು. ಭಾಷಣಗಳಿಗಾಗಿ ಟಿಪ್ಪಣಿಗಳನ್ನು ಅವರು ಎಂದೂ ಬಳಸಿದವರಲ್ಲ. ಅತ್ಯುಕ್ತಿ ತಪ್ಪೆಂಬಂತೆ, ಯಾವ ಅಡೆತಡೆಯೂ ಇಲ್ಲದೆ ಹೊಮ್ಮುತ್ತಿದ್ದ ಅವರ ಮಾತಿನ ಪ್ರಸಾದಗುಣ, ವಿಷಯವನ್ನು ವಿಸ್ತರಿಸುವ ರೀತಿ, ಅದ್ವಿತೀಯವಾಗಿರುತ್ತಿದ್ದವು. ಅವರ ಭಾಷಣಗಳು ಅವರಭಾಷಣಗಳಂತೆಯೇ ಇರುತ್ತಿದ್ದವು ಎಂದು ಹೇಳುವುದೇ ಸರಿಯಾದ ವರ್ಣನೆ.

ಎಂಥವರಿಗೂ ಎಂಥ ವಿಷಯವನ್ನೂ ತಿಳಿಯಾಗಿ ವಿಶದಪಡಿಸಬಲ್ಲ ಮಾತುಗಾರಿಕೆಯು ಮಾಟ ಅವರ ಒಳ ಮನಸ್ಸಿನ ತಿಳಿಯು, ತಿಳುವಳಿಕೆಯು. ಪ್ರತೀಕವಾಗಿ ಶ್ರೋತೃಗಳನ್ನು ಸೆರೆಹಿಡಿಯುತ್ತಿತ್ತು. ಹೇಳುವ ಕೇಳುವ ಇಬ್ಬರಿಗೂ ಅವರ ವಿದ್ವತ್ತು ಹೊರೆಯಾಗುತ್ತಿರಲಿಲ್ಲ. ಹಳಗನ್ನಡದ ಪರಿಚಯ ವಿರದ ಸಭಿಕರಿಗಾಗಿ, ಕನ್ನಡದ ಜೊತೆಯಲ್ಲಿ ಉರ್ದು ತೆಲುಗು ಬಳಕೆಯಲ್ಲಿದ್ದ ಜನಗಳಿಗಾಗಿ, ಅವರು ಪಂಪನ ಆದಿಪುರಾಣವನ್ನು ಕುರಿತು ಭಾಷಣ ಮಾಡಿದ್ದುಂಟು. ಒಂದು ಜೀವ ಧರ್ಮದ ಕಡೆಗೆ ಒಲಿದು ಸತ್ಕಾರ್ಯಗಳಿಂದ ಜಿನ ಸಿದ್ಧಿಯನ್ನು ಪಡೆದ ಕಥೆಯನ್ನು ಹೃದಯಂಗಮವಾಗಿ ಹೇಳಿ ಅಂಥ ಒಬ್ಬ ಮಹಾತ್ಮನ ಮೂರು ನಾಲ್ಕು ಜನ್ಮಗಳ ಕಥಾಭಾಗವನ್ನು ಓದಿ ತೋರಿಸಿದರಂತೆ. ಇಂಥ ಒಂದು ಕಾರ್ಯಕ್ರಮ ನಡು ರಾತ್ರಿಯ ನಂತರದಲ್ಲಿ ಒಂದೆರಡು ಗಂಟೆ ಯಶಸ್ವಿಯಾಗಿ ನೆರವೇರಬೇಕಾದರೆ ಅದನ್ನು ಅವರ ಕೊರಲಿನ ನಾದಶಕ್ತಿ ಎನ್ನಬೇಕು; ನಾಲಗೆಯನ್ನು ನಡೆಸುತ್ತಿದ್ದ ಮನಸ್ಸಿನ ಹದ ಎನ್ನಬೇಕು. ಅರ್ಥ ತಾನೇ ವಿಶದವಾಗುವಂತೆ ಓದಿ ಹೇಳುವ ರೀತಿಯು ವಿಶೇಷ ಎನ್ನಬೇಕು: ವಿಷಯ ಯಾವುದೇ ಆದರೂ ಒಂದು ಸಮಗ್ರವಾದ ಯೋಜನಾವಿಲಾಸ ಒಂದೊಂದು ಪ್ರಪಂಚವನ್ನು ವಿವರವಾಗಿ, ವಿಶದವಾಗಿ, ಪರಿಚಯಮಾಡಿ

ಕೊಡುತ್ತಿತ್ತು. ಗುಪ್ತ, ವಿದ್ವತ್ತಿನ ಸಂಸ್ಕಾರದಿಂದ ಮಾತು ಬೆಡಗು ಪಡೆಯು
ತ್ತಿತ್ತು.

ಅವರ ವ್ಯಕ್ತಿತ್ವ, ನಿಲುವು, ನೋಟ, ಧೀಶಕ್ತಿ, ಕೊರಲ ಗುಣ ಎಲ್ಲವೂ
ಅವರ ಭಾಷಣ ಕಲೆಗೆ ಪೋಷಕವಾಗಿದ್ದುವು. ನಡು ಎತ್ತರದ ನಿಲುವು;
ತುಂಬಿದ ಮೈಕಟ್ಟು; ಪ್ರಸನ್ನವಾದ, ಗಂಭೀರವಾದ ಮುಖಮುದ್ರೆ. ಇವೆಲ್ಲ
ವನ್ನು ಎತ್ತಿ ತೋರಿಸುವಂತೆ ಆಡಂಬರವಿಲ್ಲದೆಯೂ ಅಚ್ಚುಕಟ್ಟಾದ ವೇಷ,
ಮುಚ್ಚುಕೋಟು, ಪಟ್ಟೆಜರಿಯ ರುಮಾಲು. ಅವರು ಭಾಷಣಕ್ಕೆಂದು
ಎದ್ದು ನಿಲ್ಲುತ್ತಿರುವಂತೆಯೇ ಒಂದು ವಾತಾವರಣ ನಿರ್ಮಾಣವಾಗುತ್ತಿತ್ತು.
ಶಾಂತ ಗಂಭೀರವಾಗಿ ಮಾತುಗಳು ಮುಂದುವರಿಯುತ್ತಿದ್ದುವು. ಯಾವ
ಸನ್ನಿವೇಶದಲ್ಲಿಯೂ ಅವರು ದನಿಯನ್ನು ಎತ್ತರಿಸಿ ಮಾತನಾಡುತ್ತಿದ್ದಿಲ್ಲ.
ಸಹಜದ ಸ್ವರದಲ್ಲಿಯೇ ಪರಿಮಿತಗಳನ್ನು ಸಾಧಿಸಿಕೊಂಡು ಭಾವಕ್ಕೆ ತಕ್ಕಂತೆ
ಮಾತು ಮಣಿಯುತ್ತಿತ್ತು. ತರಗತಿಗಳಲ್ಲಿ ಅವರು ಪಾಠದಲ್ಲಿ ತನ್ಮಯರಾಗಿ
ರುತ್ತಿದ್ದರು. ಆದರೆ ಸಾರ್ವಜನಿಕ ಭಾಷಣಗಳಲ್ಲಿಯ ತನ್ಮಯತೆ ಬೇರೆ
ರೀತಿಯದಾಗಿರುತ್ತಿತ್ತು. ವಿಷಯ ವಿವರಣೆಗೆ ಅಗತ್ಯವಾದ ತನ್ಮಯತೆಯನ್ನು
ಸಾಧಿಸಿದಾಗಲೂ ಸಭಿಕರೊಡನೆ ಒಂದಾಗಿರುತ್ತಿದ್ದರು. ಪ್ರತಿಕ್ರಿಯೆಯನ್ನು
ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಮಧ್ಯದಲ್ಲಾಗಲಿ, ಮೊದಲಲ್ಲಾಗಲಿ,
ಎಲ್ಲಿಯಾದರೂ ಅಪ್ತ ಮಾತು ಬಂದದ್ದಾದರೆ ಅಂದಿನ ಭಾಷಣದ ಬಗೆಯೇ
ಬೇರೆಯಾಗುತ್ತಿತ್ತು. ಮನಸ್ಸಿನ ತೂಕವನ್ನು ಕಳೆದುಕೊಳ್ಳದಿದ್ದರೂ ಮಾತು
ಕಾವೇರುತ್ತಿತ್ತು. ವ್ಯಂಗ್ಯದ ಮೊನೆ ಇರಿಯುತ್ತಿತ್ತು. ಅವರು ತೋರುತ್ತಿದ್ದ
ಸಂಯಮವೇ ಒಂದು ಶಕ್ತಿಯಾಗುತ್ತಿತ್ತು. ಆದರೆ ಅಂಥ ಸನ್ನಿವೇಶಗಳಲ್ಲಿ
ಸಾಮಾನ್ಯವಾಗಿ ಅವರ ಭಾಷಣಗಳಲ್ಲಿರುತ್ತಿದ್ದ ಪ್ರಸನ್ನತೆಯ ಸೊಗಸು ಇಲ್ಲ
ದಾಗುತ್ತಿತ್ತು. ಮಾತಿಗೆ ನಿಂತಾಗ ಪದಗಳಿಗಾಗಿ ಅವರು ಎಂದೂ ಕಾಯಬೇಕಾ
ಗಿರಲಿಲ್ಲ. ಪ್ರೊ. ಮೂರ್ತಿರಾಯರು ಹೇಳಿರುವಂತೆ "ಕರೆ ಬರುವುದಕ್ಕಿಂತ
ಮುಂಚೆಯೇ ಅವು ಓಡಿ ಬಂದು ನಿಂತಿರುತ್ತಿದ್ದುವು. ಹತ್ತು ಪರ್ಯಾಯ
ಪದಗಳು ಅವರ ಅನುಗ್ರಹಕ್ಕಾಗಿ ಕಾದು ನಿಂತಿರುತ್ತಿದ್ದುವು. ಕೆಲವು ವೇಳೆ
ಅವರು ಅವೆಲ್ಲವನ್ನೂ ಉಪಯೋಗಿಸುತ್ತಿದ್ದುದುಂಟು. ಆದರಿಂದಾಗಿ ನಿಷ್ಪ

ಷ್ಟತೆ ಕಡಿಮೆಯಾದರೂ ವಾತಾವರಣ ಸಂಪತ್ತು ಹೆಚ್ಚುತ್ತಿತ್ತು. ಅವರ ಭಾಷಣದ ತರ್ಕ ತತ್ವಶಾಸ್ತ್ರಕ್ಕೆ ಹೋಲುವಂಥದಲ್ಲ, ಕಾವ್ಯಕ್ಕೆ ಹೊಂದುವಂಥಾದ್ದು" ಎಂದಿದ್ದಾರೆ.

(೫)

ಕನ್ನಡದ ಬಗೆಯಲ್ಲಿ ಪ್ರೀತಿ ಅಭಿಮಾನಗಳನ್ನು ಜಾಗೃತವಾಗಿಸುವುದನ್ನೇ ತಮ್ಮ ಜೀವನ ಮಂತ್ರವಾಗಿಸಿಕೊಂಡ ಶ್ರೀಕಂಠಯ್ಯನವರಿಗೆ ಕನ್ನಡ ನಾಡಿನ, ಅದರಲ್ಲಿಯೂ ಉತ್ತರ ಕರ್ನಾಟಕದ, ಸಂಚಾರವೆಂದರೆ ಎಂದಿಗೂ ಅಚ್ಚುಮೆಚ್ಚು. ಒಂದೊಂದು ಪ್ರವಾಸವೂ ಅವರ ಪಾಲಿಗೆ ತೀರ್ಥಯಾತ್ರೆಯಂತಿರುತ್ತಿತ್ತು. ಒಂದೊಂದು ಸ್ಥಳವೂ ಒಂದೊಂದು ಬಗೆಯ ಭಾವ ಕೇಂದ್ರವಾಗಿರುತ್ತಿತ್ತು. ಪಂಪನ ಹೃದಯವನ್ನು ಸೂರೆಗೊಂಡಿದ್ದ ಬನವಾಸಿ, ಕುಮಾರವ್ಯಾಸನ ನೆಲೆಯಾದ ವೀರನಾರಾಯಣನ ಗದಗು, ವಿಜಯನಗರ ಸಾಮ್ರಾಜ್ಯ ವೈಭವವನ್ನು ಮೆರೆದಿದ್ದ ಹಂಪೆ, ಚಾಲುಕ್ಯ ಚಕ್ರವರ್ತಿಯ ರಾಜಧಾನಿಯಾಗಿದ್ದ ಬಾದಾಮಿ, ಬಸವೇಶ್ವರರ ಬಾಗೇವಾಡಿ, ಸಂಗಮ, ಚಾಲುಕ್ಯ ಶಿಲ್ಪವೈಭವದ ಐಹೊಳೆ, ಪಟ್ಟದಕಲ್ಲು, ಎಂದು ಕನ್ನಡ ನಾಡಿನ ಚರಿತ್ರೆ, ಸಾಹಿತ್ಯ, ಶಿಲ್ಪ, ಧರ್ಮಜಾಗೃತಿ ತನ್ನ ಅವಶೇಷಗಳನ್ನು ಉಳಿಸಿದ ಜಾಗಗಳೆಲ್ಲವೂ ಅವರಿಗೆ ಪುಣ್ಯಕ್ಷೇತ್ರಗಳಾಗಿದ್ದವು. ಎಷ್ಟು ಸಲ ಅವನ್ನು ಕಂಡರೂ ಅವರಿಗೆ ಸಮಾಧಾನವಿರಲಿಲ್ಲ. ಸಂಚಾರದಲ್ಲಿಯ ಅನನುಕೂಲಗಳ ಪರಿವೆ ಇರಲಿಲ್ಲ. ತೀರ ಅನಿವಾರ್ಯವಲ್ಲದ ಹೊರತು ಅವರು ಇಂಥ ಸಂಚಾರಗಳ ಅವಕಾಶಗಳನ್ನು ಬಿಟ್ಟುಕೊಡುತ್ತಲೇ ಇರಲಿಲ್ಲ.

ಶ್ರೀಕಂಠಯ್ಯನವರು ಕನ್ನಡ ನಾಡನ್ನು ಸಂಚರಿಸುತ್ತಿದ್ದದ್ದು ಕೇವಲ ನಾಡ ಪ್ರೀತಿಗಾಗಿರಲಿಲ್ಲ. ಹತ್ತಾರು ಆಡಳಿತಗಳಿಗೆ ಒಳಪಟ್ಟಿದ್ದ ಕನ್ನಡ ನಾಡು ಒಂದಾಗದೆ ಕನ್ನಡ ಬೆಳೆಯುವುದು ಅಸಾಧ್ಯವಾಗಿದ್ದರಿಂದ ನಾಡು ಒಂದಾಗುವಂತೆ ಪ್ರಚಾರ ನಡೆಯಬೇಕಾಗಿತ್ತು. ಆದರೆ ಏಕೀಕರಣ ರಾಜಕೀಯ ಪ್ರಶ್ನೆ. ಅದನ್ನು ಬಿಡಿಸಬೇಕಾದವರು ಕಾಂಗ್ರೆಸ್ಸಿನವರು, ಮಹಾತ್ಮಾ ಗಾಂಧೀಯವರು. ಅವರಿಗೆ ಸಹಜವಾಗಿಯೇ ಕನ್ನಡನಾಡಿನ ಏಕೀಕರಣಕ್ಕಿಂತ ಭಾರತದ

ಸ್ವಾತಂತ್ರ್ಯ, ಹೆಚ್ಚು ನಿಬದ್ಧದ್ದಾಗಿ ಕಾಣುತ್ತಿತ್ತು. ಅಲ್ಲದೆ ಶ್ರೀಕಂಠಯ್ಯನವರು ಸರಕಾರದ ಸೇವೆಯಲ್ಲಿದ್ದವರು. ನೇರವಾಗಿ ರಾಜಕೀಯ ದೃಷ್ಟಿಯ ಪ್ರಚಾರಕ್ಕೆ ತೊಡಗುವ ಹಾಗಿರಲಿಲ್ಲ. ಆದರೆ ನಾಡು ರಾಜಕೀಯವಾಗಿ ಒಂದಾಗುವುದಕ್ಕೆ ಪೂರ್ವಭಾವಿಯಾಗಿ ಬೇರೆ ಬೇರೆ ಭಾಗಗಳಲ್ಲಿಯ ಜನಗಳ ಮನಸ್ಸು ಒಂದಾಗಬೇಕಿತ್ತು. ತಮ್ಮ ನಾಡು ಒಂದು, ನುಡಿ ಒಂದು, ಎಂಬ ಅರಿವು ಬೆಳೆಯಬೇಕಾಗಿತ್ತು. ಅನ್ಯೋನ್ಯ ಸಂಪರ್ಕ ಸಂಬಂಧಗಳು ಬೆಳೆಯದೆ ಏಕೀಕರಣಕ್ಕೆ ಅಗತ್ಯವಾದ ಸಿದ್ಧತೆ ನಡೆಯಲಾರದು. ಶ್ರೀಕಂಠಯ್ಯನವರ ಪ್ರಚಾರ ಈ ದೃಷ್ಟಿಯಿಂದ ನಡೆಯುತ್ತಿತ್ತಾದ್ದರಿಂದ ಅದನ್ನು ಯಾರೂ ಆಕ್ಷೇಪಿಸುವಂತಿರಲಿಲ್ಲ. ಏಕೀಕರಣದ ಪ್ರಶ್ನೆಯನ್ನು, ಅದರ ಅಗತ್ಯವನ್ನು, ಸಾಂಸ್ಕೃತಿಕ ದೃಷ್ಟಿಯಿಂದ ಒತ್ತಿಹೇಳುವ ಕೆಲಸವನ್ನು ಅವರು ತಮ್ಮ ನೂರಾರು ಭಾಷಣಗಳ ಮೂಲಕ ಮಾಡಿದರು. ಕನ್ನಡ ಸಂಸ್ಕೃತಿಯ ಪ್ರತಿನಿಧಿಯಾಗಿ ಏಕೀಕರಣದ ಆಕಾಂಕ್ಷೆಯ ಪ್ರತೀಕವಾದರು. ನಾಡು ಒಂದಾದದ್ದನ್ನು ಅವರು ನೋಡಲಿಲ್ಲ. ಆದರೆ ಅದಕ್ಕೆ ಅಡಿಪಾಯವಾಗಿ ಮೈಸೂರಿನೊಡನೆ ಹೊರಗಿನವರ ಸಂಪರ್ಕ ನಾಡಿದ ಸಂಬಂಧಗಳು ಹೆಚ್ಚುವಂತೆ ಶ್ರೀಕಂಠಯ್ಯನವರು ಪ್ರವಾಸಗಳು, ಭಾಷಣಗಳು, ನೇರವಾದ ಪ್ರಚಾರಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಏಕೀಕರಣಕ್ಕೆ ಸಾಧಕವಾದವು.

(೬)

ಜಮಖಂಡಿಯ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀಕಂಠಯ್ಯನವರನ್ನು ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆ ಮಾಡಲಾಯಿತು. ಮುಂದಿನ ನಾಲ್ಕು ವರ್ಷಗಳ ಕಾಲ ಅವರು ಕಾಲೇಜಿನಲ್ಲಿ ಪಾಠ ಪ್ರವಚನಗಳನ್ನು ಮಾಡುತ್ತಿದ್ದ ನಿಷ್ಠೆಯಿಂದಲೇ ಪರಿಷತ್ತಿನ ಕಾರ್ಯ ಕಲಾಪಗಳನ್ನು ನೋಡಿಕೊಂಡರು. ಕನ್ನಡದ ಬಗೆಯಲ್ಲಿಯ ಅಭಿಮಾನವನ್ನು ಉಕ್ಕಿಸಬಲ್ಲ ಹಳೆಹೊಸ ಪದ್ಯಗಳನ್ನು ಸಂಕಲಿಸಿ "ಕನ್ನಡ ಬಾವುಟ" ಎಂಬ ಕವನ ಸಂಗ್ರಹವನ್ನು ಪ್ರಕಟಿಸಿದರು. "ಕನ್ನಡ ನುಡಿ" ಪತ್ರಿಕೆಯನ್ನು ಪ್ರಾರಂಭಿಸಿದರು. ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಿದರು. ಎಲ್ಲಕ್ಕೂ ಮುಖ್ಯವಾಗಿ ಆರು ಸಾವಿರ ರೂಪಾಯಿಗಳನ್ನು ತಾವೇ ಕೊಟ್ಟು ಪರಿಷತ್ತಿಗೆ ಸ್ವಂತದ ಅಚ್ಚುಕೂಟವನ್ನು ಒದಗಿಸಿ

ಕೊಟ್ಟರು. ಅವರ ಸತ್ಕಾರ್ಯಗಳನ್ನು ಗುರುತಿಸಿದ ಸರಕಾರ ಅವರಿಗೆ "ರಾಜಸೇವಾಸಕ್ತ" ಎಂಬ ಬಿರುದನ್ನು ದಯಪಾಲಿಸಿತು. ವಿಶ್ವವಿದ್ಯಾನಿಲಯದ ಸೇವೆಯಿಂದ ಮೂರು ವರ್ಷಗಳ ವಿಸ್ತರಣದ ನಂತರ ೧೯೩೭ರಲ್ಲಿ ನಿವೃತ್ತರಾದರು. ಅದೇ ವರ್ಷ ಪರಿಷತ್ತಿನ ಉಪಾಧ್ಯಕ್ಷ ಪದವಿಯಿಂದಲೂ ನಿವೃತ್ತರಾದರು.

ಸಭೆ ಸಮಿತಿಗಳ ಒಪ್ಪಿಗೆಗಾಗಿ ಕಾಯದೆ ಆಗಬೇಕಾದ ಕೆಲಸಗಳನ್ನು ಮಾಡಿ ಮುಗಿಸುವ ಮನೋಧರ್ಮ ವಿರೋಧದ ಪ್ರತಿಕ್ರಿಯೆಗಳಿಗೆ ಕಾರಣವಾಗುತ್ತದೆ. ಉಪಾಧ್ಯಕ್ಷರಾಗಿ ಯಾವ ಒಂದು ಕ್ರಮವನ್ನೂ ಅನುಸರಿಸದೆ ತಮಗೆ ಮನಬಂದಂತೆ ಪರಿಷತ್ತನ್ನು ನಡೆಸುತ್ತಾರೆಂಬ ಆಕ್ಷೇಪಣೆಗೆ ಶ್ರೀಕಂಠಯ್ಯನವರು ಗುರಿಯಾಗಬೇಕಾಯಿತು. ಇಂಗ್ಲೀಷಿನ ಪರವಾಗಿ ಅವರು ಹೇಳುತ್ತಿದ್ದ ಮಾತುಗಳು, ಸಂಸ್ಕೃತದ ಬಗೆಯಲ್ಲಿ ಅವರು ತಳೆದಿದ್ದರೆಂಬ ಅಭಿಪ್ರಾಯಗಳು ತೀವ್ರವಾದ ವಿರೋಧವನ್ನು ಬೆಳೆಯಿಸಿದವು. ಇಂಗ್ಲೆಂಡಿನ ವಿಷಯದಲ್ಲಿ ಅವರಲ್ಲಿದ್ದ ಅಭಿಮಾನ ಅವರನ್ನು ಭಾರತ ಸ್ವಾತಂತ್ರ್ಯಕ್ಕೆ ವಿರೋಧಿ ಎನ್ನುವಂತೆ ಮಾಡಿತು. 'ಚಿರಂಜೀವಿ'ಯಾದ ಅಶ್ವತ್ಥಾಮನನ್ನು ತಮ್ಮ ನಾಟಕದಲ್ಲಿ ಆತ್ಮಹತ್ಯೆಗೆ ತೊಡಗಿಸಿದ್ದು ಸಂಪ್ರದಾಯಸ್ಥರನ್ನು ಅತಿಯಾಗಿ ನೋಯಿಸಿತು. ಕನ್ನಡ ಸಾಹಿತ್ಯವನ್ನು ಹಾಳುಗೆಡಿಸುತ್ತಿದ್ದಾರೆ ಎನ್ನುವವರೆಗೆ ಮಾತು ಹೋಯಿತು. ಪರಿಷತ್ತಿನ ಹೆಸರಿನಲ್ಲಿಯ 'ನ' 'ಣ' ಗಳ ಪ್ರಶ್ನೆ ಒಂದು ಕಾಳಗವೇ ಆಯಿತು. ಮೂವತ್ತು ವರ್ಷಗಳ ಕಾಲ ಕನ್ನಡ ನಾಡು ನುಡಿಗಳ ಸೇವೆ ತಮ್ಮ ಜೀವ ದುಸಿರು ಎಂದು ನಡೆದವರನ್ನು ಈ ಬಗೆಯ ಪ್ರತಿರೋಧ ನೋಯಿಸಿದ್ದರೆ ಅದು ಸ್ವಾಭಾವಿಕವೇ. ಅವರ ಬದುಕಿನ ಕೊನೆಯ ಮೂರು ನಾಲ್ಕು ವರ್ಷಗಳನ್ನು ಒಂದು ಬಗೆಯ ವಿಫಲಭಾವನೆ ಕವಿಯಿತು. ಆರೋಗ್ಯ ಸರಿಯಾಗಿರಲಿಲ್ಲ, ರಕ್ತದ ಒತ್ತಡ ಹೆಚ್ಚುತ್ತಿತ್ತು, ಮಧುಮೇಹ ಬೆಳೆಯುತ್ತಿತ್ತು. ಅಂಥದರಲ್ಲಿಯೂ ಸ್ನೇಹಿತರ ಒತ್ತಾಯಕ್ಕೆ ಮಣಿದು ೧೯೪೪ರಲ್ಲಿ ಧಾರವಾಡದಲ್ಲಿ ಪ್ರಾರಂಭವಾದ ಹೊಸ ಕಾಲೇಜೊಂದರ ಮುಖ್ಯಸ್ಥರಾಗಿ, ಅದೂ ಕನ್ನಡದ ಕೆಲಸ, ತಮ್ಮಿಂದ ಆಗಬಹುದಾದ ಪ್ರಯೋಜನ ಆಗಲಿ, ಎಂದು ಹೋದರು. ಆದರೆ ಕಾರ್ಯನಿರ್ವಹಣೆಯಲ್ಲಿ ಅವರು ಬಯಸುತ್ತಿದ್ದ

ಸ್ವಾತಂತ್ರ್ಯವನ್ನು ಕೊಡದೆ ಆಡಳಿತ ವರ್ಗದವರು ಅವರನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ. ಹೋಗಿ ಎರಡು ವರ್ಷಗಳಾಗುವಷ್ಟರಲ್ಲಿ ೧೯೪೬ರ ಜನವರಿ ೫ ರಂದು ಹೃದಯಾಘಾತದಿಂದ ಅಕಸ್ಮಾತ್ತಾಗಿ ನಿಧನರಾದರು. ಮೂವತ್ತೈದು ವರ್ಷಗಳ ಹಿಂದೆ ಹೊಸಗನ್ನಡಕ್ಕಾಗಿ ಧಾರವಾಡದಲ್ಲಿ ಕಹಳೆಯನ್ನೂದಿದ್ದರು. ಧಾರವಾಡದಲ್ಲಿಯೇ ಕೊನೆಯುಸಿರನ್ನೆಳೆದರು.

(೭)

ಧಾರವಾಡದ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ೧೯೧೧ರಲ್ಲಿ ಮಾಡಿದ "ಕನ್ನಡ ಮಾತು ತಲೆಯೆತ್ತುವ ಬಗೆ" ಎಂಬ ಭಾಷಣ ಮತ್ತು ೧೯೨೮ರಲ್ಲಿ ಕಲಬುರ್ಗಿಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದಿಂದ ಮಾಡಿದ "ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ" ಎಂಬ ಭಾಷಣ—ಈ ಎರಡು ಭಾಷಣಗಳು ಶ್ರೀಕಂಠಯ್ಯನವರು ಕನ್ನಡದ ಪುನರುಜ್ಜೀವನವನ್ನು ಕುರಿತು ಇರಿಸಿಕೊಂಡಿದ್ದ ಆಲೋಚನೆಗಳನ್ನು ಸ್ಪಷ್ಟವಾಗಿ, ನಿಷ್ಪಕ್ಷಪಾತವಾಗಿ, ನಿವೇದಿಸುತ್ತವೆ. ಹೊಸ ಸಾಹಿತ್ಯದ ನಿರ್ಮಾಣಕ್ಕಾಗಿ ಮಾಡಿದ ಧ್ಯೇಯಘೋಷಣೆಗಳಂತಿವೆ ಅವೆರಡೂ.

ಮೊದಲನೆಯ ಉಪನ್ಯಾಸ ಕನ್ನಡದ ಅಂದಿನ ಶೋಚನೀಯ ಸ್ಥಿತಿಯನ್ನು ವಿವರಿಸಿ ಅದಕ್ಕೆ ಪರಿಹಾರವನ್ನು ಸೂಚಿಸುತ್ತದೆ. ಒಂದು ಕಡೆ ಸಂಸ್ಕೃತದ ಹೆಮ್ಮೆ; ಇನ್ನೊಂದು ಕಡೆ ಇಂಗ್ಲಿಷಿನ ಆಕರ್ಷಣೆ. ಈ ಎರಡರ ಮಧ್ಯೆ ಕನ್ನಡವನ್ನು ಕೇಳುವವರೇ ಇರಲಿಲ್ಲ. ಸಂಸ್ಕೃತದಲ್ಲಿ ಇಲ್ಲದ್ದು ಕನ್ನಡದಲ್ಲಿ ಏನಿದೆ ಎಂದು ಒಬ್ಬರಾದರೆ ಇಂಗ್ಲಿಷ್‌ನಲ್ಲಿಯಂತೆ ಲಲಿತ ಅಥವಾ ಉಪಯುಕ್ತ ಸಾಹಿತ್ಯವಿಲ್ಲದ ಕನ್ನಡದಿಂದೇನಾಗಬೇಕಾಗಿದೆ ಎಂದು ಇನ್ನೊಬ್ಬರು. ಇವರಿಗೆ ಸಮನಾಗಿ ಹಳಗನ್ನಡದ ನಡುಗನ್ನಡದ ಹಿರಿಯ ಕೃತಿಗಳನ್ನು ಸರಿದೂಗುವ ಕೃತಿಗಳು ಮತ್ತೆ ಸಾಧ್ಯವೆ ಎಂದು ಕೇಳುವ ಕನ್ನಡದ ವೀರಾಭಿಮಾನಿಗಳು. ಇಂಥ ಸಂದಿಗ್ಧದಲ್ಲಿ ಶ್ರೀಕಂಠಯ್ಯನವರು ತಮ್ಮ ನಿಲುವನ್ನು ಹೊಸ ಧೋರಣೆಯನ್ನು ವಿವರಿಸಿದರು. ಇಂಗ್ಲಿಷ್ ಹಾಗೂ ಸಂಸ್ಕೃತಗಳನ್ನು ಬಿಟ್ಟುಕೊಟ್ಟರೆ ಆಗುವುದಿಲ್ಲ. ಕನ್ನಡದ ಪುನರುಜ್ಜೀವನದ ಕಾರ್ಯದಲ್ಲಿ ಅವೆರಡರಿಂದ ಆಗಬೇಕಾದ ಕೆಲಸ ಬೇಕಾದಷ್ಟಿದೆ. ಅವೆರಡನ್ನು ಉಳಿಸಿಕೊಳ್ಳಬೇಕೆಂದಮಾತ್ರಕ್ಕೆ

ದೇಶ ಭಾಷೆಯನ್ನು ಕಡೆಗಣಿಸಬೇಕೆಂದಲ್ಲ. ಸಂಸ್ಕೃತದಿಂದ ಕನ್ನಡಕ್ಕೆ ಆಗಿದ್ದ ಉಪಕಾರಕ್ಕೆ ಸರಿಯಾಗಿ ಅಪಕಾರವೂ ಆಗಿದೆ. ಸಂಸ್ಕೃತದಲ್ಲಿ ಬರೆವವರು ಪೋಷಕರ ಪ್ರೀತಿಗಾಗಿಯೋ ತಮ್ಮ ಪಾಂಡಿತ್ಯದ ಪ್ರದರ್ಶನಕ್ಕಾಗಿಯೋ ಬರೆದರು. ಸಾಮಾನ್ಯರಿಗಾಗಿ ಬರೆಯಲಿಲ್ಲ. ಪಂಪ ರನ್ನರಂಥ ಹಿರಿಯ ಕವಿಗಳು ಕನ್ನಡದಲ್ಲಿ ಆಗಿಹೋದರೂ ಸ್ವತಂತ್ರ ಪ್ರತಿಭೆಯ ಅಂಥವರು ಎಷ್ಟು ಮಂದಿ? ಹೆಚ್ಚಿನವರು ವಸ್ತು, ರೀತಿ, ಭಾವ, ರೂಪ, ಎಲ್ಲದರಲ್ಲಿಯೂ ಒಂದೇ ರೀತಿಯಾಗಿ ಅನುಕರಣೆಯನ್ನು ಮಾಡಿದರು. ಹಾಗೆಂದು ಕನ್ನಡವನ್ನು ಕೈ ಬಿಡಲಾಗುವುದಿಲ್ಲ. ಹಿಂದಿನ ಗ್ರಂಥಗಳನ್ನು ಶೇಖರಿಸಿ ಬೆಳಕಿಗೆ ತರಬೇಕಾಗಿದೆ. ಕಾಲಕ್ಕೆ ತಕ್ಕಂತೆ ಹೊಸ ಲಕ್ಷಣಗ್ರಂಥಗಳನ್ನು ರಚಿಸಬೇಕಾಗಿದೆ. ಪೂರ್ವಿಕರ ಉತ್ತಮ ಗ್ರಂಥಗಳನ್ನು ಪ್ರಚಾರ ಮಾಡಬೇಕಾಗಿದೆ. ಇದರ ಜೊತೆಯಲ್ಲಿ ಎಲ್ಲರಿಗೂ ಓದಲು ಅನುಕೂಲವಾಗುವಂತೆ ಹೊಸಗನ್ನಡವನ್ನು ಬಳಕೆಯಲ್ಲಿ ತರಬೇಕಾಗಿದೆ. ಸಾಮಾಜಿಕನಿಗೆ ಸಂತೋಷದ ಜೊತೆಯಲ್ಲಿ ಪ್ರಯೋಜನವೂ ಆಗಬೇಕಾದ ರೀತಿಯಲ್ಲಿ ಗ್ರಂಥರಚನೆ ನಡೆಯಬೇಕಾಗಿದೆ. ಇಂಗ್ಲೀಷ್ ಮತ್ತು ಸಂಸ್ಕೃತದಿಂದ ಮಾತ್ರವಲ್ಲದೆ ಬೇರೆ ಸಾಹಿತ್ಯಗಳಿಂದಲೂ ಮಾಡಿದ ಅನುವಾದಗಳ ಮೂಲಕ ನಮ್ಮ ಸಾಹಿತ್ಯವನ್ನು ಶ್ರೀಮಂತವಾಗಿಸಬೇಕಾಗಿದೆ.

ಕಲಬುರ್ಗಿಯ ಭಾಷಣ ನವೋದಯ ಸಾಹಿತ್ಯದ ಆಶೋತ್ತರಗಳನ್ನು, ರೀತಿ ವಿಧಾನಗಳನ್ನು ವಿವರವಾಗಿ ತಿಳಿ ಹೇಳುತ್ತದೆ. ಅಲ್ಲಿಯ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು:

ನವಜೀವನದಲ್ಲಿ ಕಾಲಿಡುತ್ತಿರುವ ಜನಸಾಮಾನ್ಯಕ್ಕೆ ಹಳಗನ್ನಡ ಮತ್ತು ನಡುಗನ್ನಡ ಸಾಹಿತ್ಯದಿಂದ ಹೆಚ್ಚಿನ ಪ್ರಯೋಜನವಾಗಲಾರದು. ಅದು ಪುರಾತನ ಪ್ರಪಂಚದ ಸಾಹಿತ್ಯ. ಮಾನವನ ವಿವಿಧ ವಿಶಾಲ ಮನೋವೃತ್ತಿಗಳನ್ನು ವಿವರಿಸುವ ವಾಣಿ ಅದಲ್ಲ. ವಿಷಯ, ವೈರಾಗ್ಯ: ತಪ್ಪಿದರೆ ಶೃಂಗಾರ. ಸಂಸ್ಕೃತ ಮತ್ತು ಇಂಗ್ಲೀಷಿನ ಮಹಾಕವಿಗಳ ಪ್ರತಿಭೆಯಾಗಲಿ, ಕಲ್ಪನಾಶಕ್ತಿಯಾಗಲಿ ಅಲ್ಲಿ ಕಾಣಸಿಗುವುದಿಲ್ಲ. ಶ್ರೇಷ್ಠ ಸಾಹಿತ್ಯ ಎನ್ನಬಹುದಾದದ್ದು ನಮ್ಮಲ್ಲಿ ಹೇರಳವಾಗಿದೆ ಎನ್ನಲಾಗುವುದಿಲ್ಲ. ಆದ್ದರಿಂದ ದುರಭಿಮಾನವನ್ನು

ನೂರವರಿಸಿ ತಾರತಮ್ಯ ದೃಷ್ಟಿಯ ವಿಮರ್ಶೆಗೆ ತೊಡಗಬೇಕಾಗಿದೆ. ಹಿಂದಿನ ಸಾಹಿತ್ಯ ಎಷ್ಟೇ ಒಳ್ಳೆಯ ಭಾಗಗಳನ್ನು ಒಳಗೊಂಡಿದ್ದರೂ ಹೊಸ ಪ್ರಪಂಚದಲ್ಲಿ ಬೆಳೆಯುತ್ತಿರುವವರಿಗೆ ಬೇಕಾದ ರುಚಿ ಸಂಸ್ಕಾರಗಳನ್ನು ಅದು ಕೊಡಲಾರದು.

ಅಂಥವನ್ನು ಹೊಸ ಸಾಹಿತ್ಯ ಮಾತ್ರ ಕೊಡಬಲ್ಲದು. ಈ ಹೊಸ ಸಾಹಿತ್ಯ ಬರಬೇಕಾದದ್ದು ಮತ ಪ್ರಸಾರಕ್ಕಾಗಿಯಲ್ಲ. ಜ್ಞಾನ ಪ್ರಸಾರಕ್ಕಾಗಿ, ಕಲಾನುಭವಕ್ಕಾಗಿ, ಈ ಹೊಸ ಬರಹಗಾರ ಪ್ರಪಂಚದ ಸಾಹಿತ್ಯದಲ್ಲಿಯ ಒಳ್ಳೆಯದೆಲ್ಲವನ್ನು ತನ್ನದಾಗಿಸಿಕೊಂಡು ಉಪಯುಕ್ತವಾದುದೆಲ್ಲವನ್ನು ಕನ್ನಡಕ್ಕೆ ಕೊಡುವವನು. ಮಾನವನ ಅಭ್ಯುದಯವನ್ನು ಚಿಂತಿಸುತ್ತ ಸಮಕಾಲೀನರ ಭಾವಾವೇಶಗಳನ್ನು ಹಾತಾಗಿಸುವವನ್ನು ಶಾಸ್ತ್ರೀಯ ಮನೋಧರ್ಮವನ್ನು ಬೆಳೆಯಿಸಿಕೊಂಡು ವಸ್ತು ವಿಚಾರಗಳೆಲ್ಲವನ್ನೂ ವಸ್ತುನಿಷ್ಠ ದೃಷ್ಟಿಯಿಂದ ಪರಿಶೀಲಿಸಿ ಸಮಾಜದ ನ್ಯೂನತೆಗಳನ್ನು, ಸಂಸ್ಕರಣದ ಮಾರ್ಗಗಳನ್ನು, ಲೋಕದ ಜನಗಳು ಸೌಹಾರ್ದದಿಂದ ವರ್ತಿಸುವಂತೆ ಮಾಡುವ ಪ್ರಯತ್ನಗಳನ್ನು ಕುರಿತಂತೆ ಎಲ್ಲರಿಗೂ ತಿಳಿಯುವಂತೆ ಬರೆಯುವವನು. ಹಳೆಯದನ್ನು ಅರಗಿಸಿಕೊಂಡು ಹೊಸದನ್ನು ಬೆಳೆಯಿಸುವವನು. ತಾಯ್ನುಡಿಯ ಮೂಲಕ ತನ್ನ ಜನಕ್ಕೆ ಜ್ಞಾನವನ್ನು ತಂದುಕೊಡುವವನು. ಇಂಗ್ಲೀಷ್ ಸಂಸ್ಕಾರದಿಂದ ಅಂಜನ ಹಾಕಿ ಪೊರೆತೆಗೆದ ಹೊಸಗಣ್ಣಿನಿಂದ ಪುರಾತನ ಶಾಸ್ತ್ರ, ಕಲೆ, ದರ್ಶನಗಳನ್ನು ಪರಿಶೋಧಿಸಿ ಜನಸಾಮಾನ್ಯರ ದೇಹಮನಸ್ಸುಗಳೆರಡನ್ನೂ ಪುಷ್ಟಿಗೊಳಿಸುವ ಸಾಹಿತ್ಯವನ್ನು ಹೊಸ ಬರಹಗಾರರು ನಿರ್ಮಿಸಬೇಕಾಗಿದೆ. ಎಲ್ಲ ಕಡೆಯಿಂದಲೂ ಗಾಳಿ, ಬೆಳಕು, ತೇಜಸ್ಸುಗಳನ್ನು ಹೀರಿಕೊಳ್ಳುವ ಉದಾರ ಹೃದಯವನ್ನು ಕನ್ನಡಿಗರು ಕಾಪಾಡಿಕೊಂಡರೆ ನಮ್ಮ ಸಾಹಿತ್ಯ ಅಮೂಲ್ಯವಾಗುವುದು. ನೂರಾರು ಹೊರ ಪ್ರಭಾವಗಳನ್ನು ಕನ್ನಡಿಗಳು ಅರಗಿಸಿಕೊಂಡು ಬೆಳೆದದ್ದನ್ನು ಅವರ ಚರಿತ್ರೆಯೇ ಹೇಳುತ್ತದೆ. ಹೊಸ ಪ್ರೇರಣೆಗಳನ್ನು ಅರಗಿಸಿಕೊಂಡು ಹೊಸ ಸಾಹಿತ್ಯದ ನಿರ್ಮಾಣ ಕಾರ್ಯಕ್ಕೆ ಮತ್ತೆ ತೊಡಗಬೇಕಾಗಿದೆ.

ಇಂಗ್ಲಿಷ್ ಕಾವ್ಯ ಪ್ರಪಂಚದಿಂದ ಆಯ್ದುಕೊಂಡ ಅರವತ್ತು ಕವನಗಳ ಕನ್ನಡ ಅನುವಾದಗಳನ್ನು ಒಳಗೊಂಡ ಶ್ರೀಯುವರ "ಇಂಗ್ಲಿಷ್ ಗೀತೆಗಳು" ನವೋದಯ ಕಾವ್ಯಕ್ಕೆ ನಾಂದಿಯಾಯಿತು. ಒಂದು ಹೊಸ ಕಾವ್ಯ ಪ್ರಪಂಚದ ಬಾಗಿಲನ್ನೇ ತೆರೆದು ಕನ್ನಡ ಕಾವ್ಯದ ಚರಿತ್ರೆಯಲ್ಲಿ ಒಂದು ಹೊಸ ಯುಗವನ್ನೇ ಪ್ರಾರಂಭಿಸಿತು. ಭಾವ, ಭಾಷೆ, ಛಂದಸ್ಸು, ಎಲ್ಲದರಲ್ಲಿಯೂ ಅಷ್ಟರವುಟ್ಟಿಗಿನ ಪ್ರಭಾವವನ್ನು ಬೀರಿತು. ಮೂಲವನ್ನು ತಿಳಿದಯುವರಿಗೆ ಇವು ಅನುವಾದಗಳೆಂದು ಗೊತ್ತಾಗದ ಮಟ್ಟಿಗಿನ ಸರಳ ಸಹಜತೆಯಿಂದ ಇಲ್ಲಿಯ ರಚನೆಗಳು ಕೂಡಿವೆ. ಮೂಲದ ಕಾವ್ಯಸತ್ವ ಹೊಸರೂಪ ತಾಳಿನಿಂತಿದೆ. ಮೂಲ ಬೇರೆಯಾದರೂ ಅವತಾರ ಇಲ್ಲಿಯದು. ಪರಿಣಾಮ ಒಂದೇ. ಅಂಥ ಯಶಸ್ಸು ಇಲ್ಲಿಯ ಅನುವಾದಗಳದ್ದಾಗಿದೆ.

ಕಳೆದ ಶತಮಾನದ ಕೊನೆಯ ಭಾಗದಲ್ಲಿ ಷೇಕ್ಸಪಿಯರ್ ನಾಟಕಗಳು, ಬೇರೆ ಕಥೆ ಕಾದಂಬರಿಗಳು ಕನ್ನಡಕ್ಕೆ ಅನುವಾದವಾಗಿದ್ದರೂ ಇಂಗ್ಲೀಷ್ ಕಾವ್ಯಗಳ ಅನುವಾದಕ್ಕೆ ಈ ಶತಮಾನದ ಮೊದಲ ದಶಕದವರೆಗೆ ಯಾರೂ ಕೈ ಹಾಕಿದ್ದಂತೆ ಕಾಣುವುದಿಲ್ಲ. ಈ ದಿಸೆಯಲ್ಲಿಯ ಮೊದಲ ಪ್ರಯತ್ನಗಳನ್ನು ಎಸ್. ಜಿ. ನರಸಿಂಹಾಚಾರ್ಯರು, ಪಟ್ಟಿಯಂಗಡಿ ನಾರಾಯಣರಾಯರು ಮತ್ತು ಪಂಜೆ ಮಂಗೇಶರಾಯರು ತೊಡಗಿದ್ದರು. ಆದರೆ ಇವರಲ್ಲಿ ಎಲ್ಲರೂ ಹಿಂದಿನವರ ಪದ್ಯ ರಚನೆಯ ಕ್ರಮವನ್ನು ಅನುಸರಿಸಿದ್ದರು. ಆದಿ ಪ್ರಾಸವನ್ನು ಕೈಬಿಡುವುದಕ್ಕೆ ಒಪ್ಪುತ್ತಿರಲಿಲ್ಲ. ಆದಿ ಪ್ರಾಸವನ್ನು ಕೊನೆಯಲ್ಲಿ ಧೈರ್ಯವಾಗಿ ನಿರಾಕರಿಸಿದ ಗೋವಿಂದ ಪೈಗಳು ಮಾಡಿದ ಕೆಲವು ಅನುವಾದಗಳು ಕೂಡ ಹಳೆಯ ರೀತಿಯನ್ನೇ ಅನುಸರಿಸುತ್ತವೆ. ಇಂಗ್ಲೀಷಿನಿಂದ ಮೊದಲು ಅನುವಾದಗಳನ್ನು ಮಾಡಿದ ಈ ಎಲ್ಲರು ತಾವು ಮೆಚ್ಚಿಕೊಂಡ ಕವನಗಳನ್ನು ಕನ್ನಡಿಸಬೇಕೆಂಬ ಉದ್ದೇಶಕ್ಕಿಂತ ಹೆಚ್ಚಿನ ಆಕಾಂಕ್ಷೆಯನ್ನು ಇರಿಸಿಕೊಂಡಿರಲಿಲ್ಲ. ವಸ್ತು ವಿಷಯ ರೀತಿಗಳಲ್ಲಿ ಹೊಸ ಕಾವ್ಯ ಪ್ರಕಾರದ ಮಾದರಿಗಳನ್ನು ಕನ್ನಡಿಗರಿಗೆ ಒದಗಿಸಬೇಕೆಂಬ ದೃಷ್ಟಿ ಅವರದಾಗಿರಲಿಲ್ಲ. ಇಂಗ್ಲೀಷಿನಿಂದ ಅನುವಾದಿಸುವಾಗಿನ ತಮ್ಮ ಅನುಭವದ ಮೇಲಿಂದ ಛಂದೋಬಾಧಗಳ ನಿರ್ಬಂಧಗಳು ಸಡಿಲವಾಗಬೇಕೆಂಬ ಅಗತ್ಯವನ್ನು ಅವರು ಗುರುತಿಸಿದ್ದರಲ್ಲದೆ (ಗೋವಿಂದ

ಪ್ಯಗಳೊಬ್ಬರನ್ನುಳಿದು, ಹೊಸ ಛಂಧೋಬಂಧಗಳ ರಚನೆಗೆ ಯಾರೂ ತೊಡಗಿ ರಲಿಲ್ಲ. "ಇಂಗ್ಲಿಷ್ ಗೀತೆಗಳು" ಸಂಗ್ರಹದಲ್ಲಿಯ ಕವನಗಳನ್ನು ಅನುವಾದಿ ಸುವಾಗ ಶ್ರೀಕಂಠಯ್ಯನವರ ದೃಷ್ಟಿ ಇವರೆಲ್ಲರಿಗಿಂತ ದೂರ ಹರಿದಿತ್ತು. ಅವರಾದರೂ ತಾವು ಮೆಚ್ಚಿಕೊಂಡ ಪದ್ಯಗಳನ್ನೇ ಅನುವಾದಿಸಿದರೂ ಹೊಸ ದೊಂದು ಭಾವ ಪ್ರಪಂಚವ ಪರಿಚಯಿಸುವ ಜೊತೆಗೆ ಹೊಸ ರೀತಿಗಳ ಸಾಧ್ಯತ ಗಳನ್ನು ತೋರಿಸಿಕೊಡುವುದೂ ಅವರ ಉದ್ದೇಶವಾಗಿತ್ತು. ಆದ್ದರಿಂದ ಇಲ್ಲಿಯ ಅನುವಾದಗಳಿಗೆ ಅವುಗಳ ಉತ್ತಮಿಕೆಯ ದೃಷ್ಟಿಯಿಂದ ಒಂದು ಬಗೆಯ ಮಹತ್ವ ಪ್ರಾಪ್ತವಾಗುತ್ತದಾದರೆ ಕನ್ನಡ ಕಾವ್ಯದ ಚರಿತ್ರೆಯ ದೃಷ್ಟಿ ಯಿಂದ ಮತ್ತೊಂದು ಬಗೆಯ ಮಹತ್ವವೂ ಪ್ರಾಪ್ತವಾಗುತ್ತದೆ. "ಇಂಗ್ಲಿಷ್ ಗೀತೆಗಳು" ಕನ್ನಡದಲ್ಲಿ ಭಾವಗೀತೆಯ ಯುಗವನ್ನು ಪ್ರಾರಂಭಿಸಿತು.

"ವಿಶ್ವಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖ ದುಃಖಗಳು, ರಾಗ ದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯ ವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಪುಷ್ಟಿಗೊಳಿಸಿ ಸಹಜ ಭಾಷೆಯಲ್ಲಿ ಸೌಂದರ್ಯ ರಚನೆಯನ್ನು ಮಾಡಿರುವರೊ ಅದನ್ನೆಲ್ಲ ಪರಾಮರ್ಶಿಸಿ" ಕನ್ನಡ ಕವಿಗಳು ಮುಂದುವರಿಯಬೇಕೆಂಬ ಅಭಿಲಾಷೆಯಿಂದ ಇಲ್ಲಿಯ ಅನುವಾದಗಳನ್ನು ಅವರ ಮುಂದೆ ಇಡಲಾಗಿದೆ ಎಂದು ಶ್ರೀಯವರು ತಮ್ಮ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ.

ಸಂಗ್ರಹದಲ್ಲಿಯ ಕವನಗಳನ್ನು ಒಂದು ವಿಶಿಷ್ಟವಾದ ಕ್ರಮದಲ್ಲಿ ನಿಲ್ಲಿಸಿದ ಹಾಗೆ ಕಾಣುತ್ತದೆ. ಯುವಕಸಹಜವಾದ ಉತ್ಸಾಹದಿಂದ ಮೊದಲಾಗಿ ಜೀವನದ ನಿಗೂಢವನ್ನು ಅರಿಯಲಾಗದೆ ದೈವಶಕ್ತಿಗೆ ಶರಣು ಹೋಗುವ ಮನಃಸ್ಥಿತಿಯ ವರೆಗೆ ಇಲ್ಲಿಯ ಭಾವಧಾರೆ ಹರಿದಿದೆ. ಒಂದು ಜೀವ ಬೆಳೆಯುವ ಕ್ರಮ ಇಲ್ಲಿ ಸೂಚಿತವಾಗುತ್ತದೆ. ಮೊದಲನೆಯ ಆರು ಕವನಗಳಲ್ಲಿ ನಿಸರ್ಗದ ಸೌಂದರ್ಯದ ಬಗೆಗಳನ್ನು ಕಾಣುತ್ತೇವೆ. ಅಡವಿ ಮರದಡಿಯಲ್ಲಿಯ ಪ್ರಶಾಂತತೆಯ ಸಂತಸ, ವಸಂತದ ಬರವು, ಕೋಗಿಲೆಯ ಉಲಿ, ಮಳೆಬಿಲ್ಲು, ಉಲ್ಲಾಸ,

ಕುರಿಮರಿಯ ಅಕ್ಕರೆ, ಅಂತರಂಗವನ್ನು ನೆಲದಿಂದ ಬಾನೆತ್ತರಕ್ಕೆತ್ತಬಲ್ಲ ಬಾನಾಡಿಯ ಹಾಡು, ಇಂಥ ಸೌಂದರ್ಯದ ಬಗೆಗಳಾಗಿ ಕಾಣುತ್ತವೆ. ದೇಶ ಪ್ರೇಮದ ವಿವಿಧ ಆವಿಷ್ಕಾರಗಳನ್ನು ಚಿತ್ರಿಸುವ ಕವನಗಳಲ್ಲಿ ಕಾಳಗದ ಕರೆ ಕೊನೆಯಲ್ಲಿ ವೀರಗಲ್ಲಿನ ಮೌನದಲ್ಲಿ ಕೊನೆಗಾಣುವುದನ್ನು ಕಾಣುತ್ತೇವೆ. ಪ್ರಪಂಚದ ಯಾವುದೋ ಒಂದು ಮೂಲೆಯಲ್ಲಿ ದೇಹವನ್ನು ಬಿಡಬೇಕಾದ ಧೀರ ಯೋಧನ ಮರಣ, ಸಾವನ್ನು ಲೆಕ್ಕಿಸದೆ ನುಗ್ಗುವ ರಾವುತರ ಭೀಕರ ತ್ಯಾಗ, ಜಲ ಸಮಾಧಿಯನ್ನು ಹೊಂದುವ ನಾವಿಕರ ದುರಂತ, ದೇಶಾಭಿಮಾನ ವನ್ನು ಉಕ್ಕಿಸಬಲ್ಲವಾದರೂ ಸಾವಿರಾರು ಜೀವಗಳನ್ನು ಬಲಿಯಾಗಿಸುವ ಯುದ್ಧಗಳು ದೊರಕಿಸುವ ವಿಜಯದ ಅರ್ಥವಾದರೂ ಎಂಥದೊ ಎಂದು ಕೇಳಿ ಕೊಳ್ಳಬೇಕಾಗುತ್ತದೆ. ಇಂದು ಗೌರವ ಪಡೆದು ನಾಳೆ ಅದೇ ಜನಗಳ ಕೋಪಕ್ಕೆ ಗುರಿಯಾಗಬೇಕಾದ ದೇಶ ಸೇವಕನ ಬಾಳಕಥೆ ಒಂದು ವಿಪರ್ಯಾಸ.

ಇಲ್ಲಿಯ ಅರ್ಧದಷ್ಟು ಕವನಗಳು ಹೆಣ್ಣು ಗಂಡುಗಳ ನಡುವಿನ ಪ್ರೀತಿ ಸೆಳೆತಗಳಿಗೆ ಮೀಸಲಾಗಿವೆ. "ಇಂಗ್ಲಿಷ್ ಕವಿಗಳು ಶೃಂಗಾರ ರಸವನ್ನು ಹೇಗೆ ಗಂಭೀರವಾಗಿಯೂ, ಸೂಕ್ಷ್ಮವಾಗಿಯೂ, ಸ್ವಾಭಾವಿಕವಾಗಿಯೂ ತೋರಿಸುವ ರೆಂಬುದನ್ನು ತಿಳಿಸುವುದಕ್ಕಾಗಿ" ಅವನ್ನು ಆಯ್ಕೆ ಮಾಡಲಾಗಿದೆ ಎಂದು ಶ್ರೀಯುವರೇ ಹೇಳಿದ್ದಾರೆ. 'ಮಾದಮಾದಿ' ಬೇಟದ ಒತ್ತಡವನ್ನು, ಅದರ ಲ್ಲಿಯ ಮುನಿಸು ಮುರುಕಗಳನ್ನಾದರೆ ಒಲಿದವಳಿಗಾಗಿ ಕೋಟಿ ಯೋಜನಗಳನ್ನು ದಾಟಿ ಬರುವಂತೆ ಪ್ರೇಮದ ಹುಡುಗಿಯ ಸೆಳೆತ ಮಾಡುತ್ತದೆ. 'ಸುಂದರಿ ಕಮಲೆ' ಹೆಣ್ಣು ಚೆಲುವಿಗೊಂದು ಹೃದಯದ ಕಾಣಿಕೆ. ಇಂಥ ಸೆಳೆತ ತನ್ನ ಬೆನ್ನ ಹಿಂದೆ ತರುವ ಕೊರಗು, ಆತುರ, ತೃಪ್ತಿ, ಬೇಸರ, ಸಮರ್ಪಣ ಭಾವದ ವಿವಿಧ ಬಗೆಗಳನ್ನಲ್ಲದೆ ಒಲುಮೆಯ ಅಲೌಕಿಕ ಸಾಮರ್ಥ್ಯವನ್ನು ಹಲವಾರು ಕವನಗಳು ಚಿತ್ರಿಸುತ್ತವೆ. ಇಂಥ ಒಲುಮೆ ಅಳಿದಾಗ ಹೃದಯ ಒಂದು ಮನೆಯೆ, ತೊಟ್ಟಿಲೆ ಅಥವಾ ಚಿತೆಯೆ ಎಂದು ಕೇಳಿಕೊಳ್ಳುವಂತಾಗುತ್ತದೆ. ಕಳೆದುಕೊಂಡವರ ಅಳಲಿಗೆ ಕಣ್ಣೀರೊಂದೇ ಕಾಣಿಕೆಯಾಗುತ್ತದೆ. ಹೊರಟು ಹೋದ ಇನಿಯಳ ಯೋಚನೆ ಕರಗಿಹೋದ ಸಂಗೀತದಂತೆ, ಸೊರಗಿಹೋದ ಗುಲಾಬಿಯಂತೆ ಒಂದು ನೆನವರಿಕೆ ಮಾತ್ರವಾಗಿ ಹೃದಯದಲ್ಲಿ ನೆಲೆಯನ್ನು

ಪಡೆಯುತ್ತವೆ. ಬೇಸರ ತುಂಬಿದ ಹೃದಯ ಇರುಳನ್ನು ಬಯಸುತ್ತದೆ. ನಿರಾಶೆ ಕವಿದ ಹೃದಯ ಸಾವನ್ನು ಬೇಡುತ್ತದೆ. ಹೀಗೆ ನೂರು ಭಾವಗಳು. ನೋವು ನಲಿವುಗಳು ಇಲ್ಲಿಯ ಪ್ರಣಯ ಗೀತೆಗಳಲ್ಲಿ ಮಾತುಗಳನ್ನು ಪಡೆದು ಓದುವವರ ಅನುಭವಗಳಾಗುತ್ತವೆ.

ಇನ್ನು ಕೆಲವು ಕಿರುಕಥನ ಕವನಗಳು ಒಲವಿನ ಸಫಲತೆಯನ್ನೋ ವಿಫಲತೆಯನ್ನೋ ಚಿತ್ರಿಸುತ್ತವೆ. ಒಲವಿನಿಂದ ಮರುಳಾಗಿ ಮಡಿದು ಹೋದುವನ ಕರುಣ ಕಥೆಯನ್ನು ಹೇಳಿ ತಾನು ಒಲಿದವಳನ್ನು ಗೆದ್ದುಕೊಂಡ ಕಥೆಯನ್ನು "ಕನಕಾಂಗಿ" ಹೇಳುತ್ತದೆ. ತೆರವು ಒಲಿದತರಹೋದ ಚಾಮನಿಗಾಗಿ ತಂದೆ ತಾಯಿಗಳ ಯೋಗಕ್ಷೇಮಕ್ಕಾಗಿ ಕಾಯಲಾಗದೆ ಮುದಿಯ ರಾಮಗೌಡನನ್ನು ಮದುವೆಯಾಗಬೇಕಾದ ಚೆನ್ನಿಯ ಬಾಳ ದುರಂತ ಒಂದು ಬಗೆಯದಾದರೆ ಪಿರಿಯನ ಒಪ್ಪಿಗೆಯಿಲ್ಲದ್ದಕ್ಕಾಗಿ ಪ್ರಣಯಿಯೊಡನೆ ನೀರ ಪಾಲಾಗಿ ಸಾಯುವ ಕಾರಿ ಹೆಗ್ಗಡೆಯ ಮಗಳ ದುರಂತ ಇನ್ನೊಂದು ಬಗೆಯದು. ವಾಳಿ ಇಟ್ಟು ಕಳ್ಳರು ಬಂದಾಗ ಕೂರ ತಂದೆಯ ನೆರವಿಲ್ಲದೆ ಅವರನ್ನು ಒಪ್ಪದೆ ನೀರಿಗೆ ಹಾಕಿದ ಏಳು ಜನ ಅಕ್ಕತಂಗಿಯರ ಮರುಕ ತುಂಬಿದ ಕಥೆ ಚೋಳಿ ಕನ್ನೆಯರದು. ಕೈಹಿಡಿದವನ ವಿಶ್ವಾಸಘಾತಕ್ಕಾಗಿ ಹೊಳೆಗೆ ಹಾರಿ ಅಸು ನೀಗಿದ ಯುವತಿಯೊಬ್ಬಳ ಹೃದಯವಿದ್ರಾವಕ ಕಥೆ ದುಃಖಿಸೇತು. ಹೂವನ್ನು ಕದ್ದು ಮುಳ್ಳನ್ನು ಬಿಟ್ಟುಹೋಗಿದ್ದ ವಂಚಕನ ನೆನಪು ಬಿಟ್ಟ ಹೆಣ್ಣುಹೃದಯದ ಮೊರೆತವಾಗುತ್ತದೆ.

ಪ್ರಣಯ ಪ್ರೀತಿಯ ಭಾವಗಳು ಮನುಷ್ಯನ ಹೃದಯವನ್ನು ಆಳುವುದು ಒಂದು ಹಂತ. ದಿನಗಳು ಉರುಳಿದ ಹಾಗೆ ಕಳೆದ ದಿನಗಳ ನೆನಹು ಸಂತಸವನ್ನೋ, ವ್ಯಾಕುಲವನ್ನೋ ಹುಟ್ಟಿಸುತ್ತದೆ. ಬದುಕಿನ ಕೊನೆಯ ಕರಿ ನೆರಳು ಚಾಚ ತೊಡಗುತ್ತದೆ. ನಂಬಬೇಕಾದದ್ದು ಪೌರುಷ ಪ್ರಯತ್ನವನ್ನೋ, ದೈವದ ಕರುಣೆಯನ್ನೋ ಎಂದು ಮನಸ್ಸು ಇಬ್ಬಗೆಯಾಗುತ್ತದೆ. ನೆಮ್ಮದಿಯ ನಾಡನ್ನು ಬಯಸಿ ಅದರ ಕನಸನ್ನು ಕಾಡುತ್ತದೆ. ಸಂತೃಪ್ತ ಜೀವನದ ಸ್ವರೂಪವನ್ನಲ್ಲದೆ ತನ್ನೊಡನಿದ್ದ ಜೀವದ ಹಾಗೂ ತನ್ನ ಸಂಬಂಧವನ್ನು

ಕುರಿತು ಚಿಂತಿಸುತ್ತದೆ. ಕೊನೆಯಲ್ಲಿ ತಮ್ಮ ಅಳಿದು ಕೈಹಿಡಿದು ನಡೆಸು ಎಂದು ದೈವತವನ್ನು ಮೊರೆ ಹೋಗುತ್ತದೆ. ಯುವಕ ಹೃದಯದ ಹಾರೈಕೆಗಳಿಂದ ತೊಡಗಿ ವಿವಿಧ ಅನುಭವಗಳನ್ನು ಪಡೆದು ಜೀವನದ ಪಯಣ ಒಂದು ಬಗೆಯ ವಿನೀತ ಭಾವದ ಪರಿಣತಿಯಲ್ಲಿ ಕೊನೆಗೊಳ್ಳುತ್ತದೆ. "ಇಂಗ್ಲಿಷ್ ಗೀತಗಳು" ಈ ಪಯಣದ ಇಣುಕು ನೋಟಗಳನ್ನು ಒದಗಿಸುತ್ತದೆ. ಬದುಕಿನ ಗತಿರೇಖೆಯನ್ನು ಗುರುತಿಸುತ್ತದೆ.

ಇಲ್ಲಿಯ ಕವನಗಳನ್ನು ಓದುತ್ತಿದ್ದ ಹಾಗೆ ಮೂರು ವಿಷಯಗಳು ತತ್ಕ್ಷಣ ನಮ್ಮ ಮನಸ್ಸಿನಲ್ಲಿ ನಿಲ್ಲುತ್ತವೆ. ಒಂದು, ಇಲ್ಲಿಯ ಭಾವಗಳು. ಬಗೆ ಬಗೆಯ ಭೋಗಗಳು ನಮ್ಮ ನಿತ್ಯ ಜೀವನದಲ್ಲಿ ಯಾರ ಅನುಭವಕ್ಕೂ ಬರಬಲ್ಲಂಥವು ಎನ್ನುವುದು. ಎರಡು, ಇವನ್ನು ವ್ಯಕ್ತ ಪಡಿಸುವುದಕ್ಕೆ ಬಳಸಿದ ಭಾಷೆ ಶುದ್ಧ ಕನ್ನಡವಾಗಿದ್ದು ಯಾವ ಅಲಂಕಾರದ ಆಡಂಬರವೂ ಇಲ್ಲದೆ ಸಹಜ ಮನೋಹರವಾಗಿ ತನ್ನ ಕಾರ್ಯವನ್ನು ನಿರ್ವಹಿಸುತ್ತದೆ ಎನ್ನುವುದು. ಮೂರು, ಇಲ್ಲಿಯ ಮಾತುಗಳು ಭಾವಕ್ಕೆ ತಕ್ಕ ಬಂಧವನ್ನು ಪಡೆದು ಅದರ ಏರಿಳಿತಗಳ ಸೂಕ್ಷ್ಮಗಳನ್ನು ಯಥಾವತ್ತಾಗಿ ಪ್ರತಿಷ್ಠಿಸುವಂತೆ ವಿವಿಧ ಛಂದೋರೂಪಗಳನ್ನು ತಾಳಿವೆ ಎನ್ನುವುದು. ಈ ಮೂರು ವಿಧದಲ್ಲಿಯೂ ಇಲ್ಲಿಯ ಅನುವಾದಗಳು ಕನ್ನಡ ಕಾವ್ಯಕ್ಕೆ ಹೊಸ ದಾರಿಯನ್ನು ತೋರಿಸಿದವು. ಕಾವ್ಯ ಪ್ರಪಂಚ ದಿನನಿತ್ಯದ ಅನುಭವ ಪ್ರಪಂಚದಿಂದ ದೂರವಾಗಿಯೋ ಬೇರೆಯಾಗಿಯೋ ಇರಬೇಕಾದದ್ದಿಲ್ಲ ಎನ್ನುವುದನ್ನು ಇಲ್ಲಿಯ ರಚನೆಗಳು ತೋರಿಸಿಕೊಟ್ಟವು. ಇದರಿಂದ ಕಾವ್ಯ ಜನಜೀವನಕ್ಕೆ ಹತ್ತಿರ ಬರುವಂತಾಯಿತು. ದಿನ ಬಳಕೆಯಲ್ಲಿ ಇಲ್ಲದ ಮಾತುಗಳು, ಕ್ಲಿಷ್ಟವಾದ ಪದಗಳು, ಇಲ್ಲಿ ಎಲ್ಲಿಯಾದರೂ ಸಿಕ್ಕುತ್ತವೆಯೋ ಎಂದು ಹುಡುಕಬೇಕಾಗುತ್ತದೆ. ಅಪರೂಪಕ್ಕೆ ಸಿಕ್ಕುವ ಸಂಸ್ಕೃತ ಪದಗಳು ತೀರ ಪರಿಚಯದ ಪದಗಳು. ಇಷ್ಟು ಸರಳವಾದ, ಸಹಜವಾದ, ಸಾಮಾನ್ಯವಾದ ಮಾತುಗಳನ್ನು ಕಾವ್ಯದಲ್ಲಿ ಬಳಸಬಹುದು, ಎಂಥ ಭಾವನೆಯ ಸೂಕ್ಷ್ಮವನ್ನೂ ನಿರಾಡಂಬರವಾಗಿ ವ್ಯಕ್ತಪಡಿಸಬಹುದು ಎನ್ನುವುದನ್ನು ನೆನೆದರೆ ಆಶ್ಚರ್ಯವೆನಿಸುತ್ತದೆ. ಇಲ್ಲಿ ನಮಗೆ ಕಾಣಸಿಗುವುದು ಅಚ್ಚಗನ್ನಡದ ನಿರಾಭರಣ ಸೌಂದರ್ಯ.

ಇಲ್ಲಿಯ ಅನುವಾದಗಳ ಇನ್ನೊಂದು ವಿಶೇಷ ಅವುಗಳ ಛಂದೋವೈವಿಧ್ಯ. ಭಾವದ ಸೂಕ್ಷ್ಮವಾದ ಮಿಡಿತಗಳನ್ನು, ಅದರ ಏರಿಳಿಗಳನ್ನು ಪ್ರತಿಸ್ಪಂದಿಸುವಂತೆ ಪದಗಳ ನುಡಿತನಡೆತಗಳನ್ನು ಯೋಜಿಸಿಕೊಳ್ಳಬಲ್ಲ ಕಲೆಗಾರಿಕೆಯಲ್ಲಿ ಕವಿಗೆ ಸ್ವಾತಂತ್ರ್ಯವಿದ್ದಾಗ ಮಾತ್ರ ವ್ಯಕ್ತಪಡಿಸಬೇಕಾದ ಭಾವವನ್ನು ಮನಮುಟ್ಟುವಂತೆ ವ್ಯಕ್ತಪಡಿಸುವುದು ಸಾಧ್ಯವಾಗುತ್ತದೆ. ಸಾಂಪ್ರದಾಯಿಕ ಛಂದೋರಚನೆಗಳಲ್ಲಿ ಕವಿಗೆ ಸ್ವಾತಂತ್ರ್ಯ ಸಿಗುವುದಿಲ್ಲ. ಅಂಥ ಸ್ವಾತಂತ್ರ್ಯ ಭಾವಾಭಿವ್ಯಕ್ತಿಗೆ ಅಗತ್ಯವೆಂಬ ದೃಷ್ಟಿಯಿಂದ "ಕನ್ನಡದ ಜಾಯಮಾನವನ್ನು ಮೀರದೆ ಎಷ್ಟುಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟು ಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ" ಎಂದಿದ್ದಾರೆ. ಮುಖ್ಯವಾಗಿ ಸ್ವರಘಾತವನ್ನು ಆಧರಿಸಿ ಪದಯೋಜನೆಯ ಮೂಲಕ ಲಯ ವೈವಿಧ್ಯವನ್ನು ಸಾಧಿಸಬಲ್ಲ ಇಂಗ್ಲಿಷ್ ಛಂದಸ್ಸಿನ ರೀತಿಯನ್ನು ಶ್ರೀಕಂಠಯ್ಯನವರು ಇಲ್ಲಿ ಮಾತ್ರಾಗಣಗಳನ್ನು ಅಡಿಪಾಯವಾಗಿರಿಸಿಕೊಂಡು ಭಾವಕ್ಕೆ ಹೊಂದುವಂತೆ ಬೇರೆಬೇರೆಯಾದ ವಿನ್ಯಾಸಗಳನ್ನು ಯೋಜಿಸಿಕೊಂಡಿದ್ದಾರೆ. ಪದಗಳ ಎಂಥ ಯೋಜನೆ ಯಾವ ಭಾವಸೂಕ್ಷ್ಮವನ್ನು ಸೂಚಿಸಬಹುದೆಂಬುದನ್ನು ಚೆನ್ನಾಗಿ ತಿಳಿದಿದ್ದ ಅವರು ಇಲ್ಲಿಯ ಅನುವಾದಗಳಲ್ಲಿ ಏರ್ಪಡಿಸಿರುವ ಛಂದೋವೈವಿಧ್ಯ ಒಂದು ಮಹತ್ವದ ಸಾಧನೆಯಾಗಿದೆ. ಇಲ್ಲಿಯ ವೈವಿಧ್ಯ ಹಾಗೂ ಸ್ವಾತಂತ್ರ್ಯ ನವೋದಯದ ಭಾವಗೀತೆಗೆ ನಾದಲಯಗಳ ಒಂದು ಹೊಸ ಪ್ರಪಂಚವನ್ನೇ ತೆರೆದುಕೊಟ್ಟವು.

"ಇಂಗ್ಲಿಷ್ ಗೀತೆಗಳ" ಪ್ರಭಾವವನ್ನು ವರ್ಡ್ಸ್‌ವರ್ತ್ ಕೋಲ್ರಿಜ್‌ರ "ಲಿರಿಕಲ್ ಬ್ಯಾಲಡ್ಸ್" ಕವನ ಸಂಗ್ರಹ ಬೀರಿದ ಪ್ರಭಾವಕ್ಕೆ ಹೋಲಿಸಲಾಗಿದೆ. ಆ ಕವನ ಸಂಗ್ರಹ ಇಂಗ್ಲೆಂಡಿನಲ್ಲಿ ಒಂದು ಹೊಸ ಕಾವ್ಯಪಂಥವನ್ನೇ ಪ್ರಾರಂಭಿಸಿತು. "ಇಂಗ್ಲಿಷ್ ಗೀತಗಳು" ಒಂದು ಹೊಸ ಕಾವ್ಯಪಂಥವನ್ನಲ್ಲದಿದ್ದರೂ ಒಂದು ಹೊಸ ಕಾವ್ಯ ಪದ್ಧತಿಯನ್ನು ಪ್ರಚುರ ಪಡಿಸಿತು. ಮಹಾಕಾವ್ಯಗಳ ಬಡ ಬಂಧುವಿನಂತಿದ್ದ ಭಾವಗೀತೆಗೆ ಸ್ವಾತಂತ್ರ್ಯವನ್ನು ಒದಗಿಸಿ ಅದಾದರೂ ಒಂದು ಸ್ವತಂತ್ರವಾದ ಕಾವ್ಯಪ್ರಕಾರವಾಗಿ ನಿಲ್ಲುವಂತೆ ಮಾಡಿತು. ಕನ್ನಡ ಕಾವ್ಯದ ಚರಿತ್ರೆಯಲ್ಲಿ ಒಂದು ಮಹತ್ವದ ಮೈಲಿಗಲ್ಲಾಗಿ, ನವೋದಯದ ಸ್ಪಷ್ಟ

ದಿಕ್ಸೂಚಿಯಾಗಿ, ಹೊಸ ರೀತಿಗೊಂದು ಕೈಮರವಾಗಿ "ಇಂಗ್ಲಿಷ್ ಗೀತಗಳು" ಚಾರಿತ್ರಿಕವಾದ ಮಹತ್ವವನ್ನು ಪಡೆದ ಒಂದು ಕವನ ಸಂಗ್ರಹವಾಗಿದೆ.

(೯)

ಇಂಗ್ಲಿಷ್ ಗೀತಗಳ ನಂತರ ಪ್ರಕಟವಾದ ಶ್ರೀಕಂಠಯ್ಯನವರ ಮೂರು ಕೃತಿಗಳು ನಾಟಕಗಳು—"ಗದಾಯುದ್ಧ ನಾಟಕಂ," "ಅಶ್ವತ್ಥಾಮನ್" ಮತ್ತು "ಪಾರಸಿಕರು". ಮೊದಲನೆಯದು ಕನ್ನಡ ಕಾವ್ಯದ ನಾಟಕ ರೂಪಾಂತರ, ಎರಡನೆಯದು ಗ್ರೀಕ್ ರುದ್ರ ನಾಟಕದ ಮಾದರಿಯಲ್ಲಿ ರಚಿತವಾದ ಸ್ವತಂತ್ರ ನಾಟಕ: ಮೂರನೆಯದು ಗ್ರೀಕ್ ನಾಟಕದ ನೇರವಾದ ಅನುವಾದ. ಈ ಮೂರೂ ನಾಟಕಗಳು ದುರಂತಗಳು ಎನ್ನುವುದು ಆಶ್ಚರ್ಯವೂ ಅಲ್ಲ, ಆಕಸ್ಮಿಕವೂ ಅಲ್ಲ. ತಮ್ಮ ವಿದ್ಯಾರ್ಥಿದೆಸೆಯಿಂದಲೂ ಶ್ರೀಕಂಠಯ್ಯನವರು ಗ್ರೀಕ್ ದುರಂತ ನಾಟಕಗಳನ್ನು ಮನಸಾರೆ ಮೆಚ್ಚಿದ್ದರು. ಅವನ್ನು ಅನುವಾದಿಸಿ ಕನ್ನಡಕ್ಕೆ ಕೊಡಬೇಕೆಂದಿದ್ದರು. ನಮ್ಮ ಲಾಕ್ಷಣಿಕರ ಪ್ರತಿಬಂಧದ ಮೂಲಕ ಭಾರತೀಯ ನಾಟಕ ಪರಂಪರೆ ದುರಂತ ನಾಟಕದ ಉದಾತ್ತವಾದ ರಸಾನುಭವಕ್ಕೆ ಎರವಾಗಿದೆ ಎನ್ನುವುದು ಅವರ ದೃಢವಾದ ನಂಬಿಕೆಯಾಗಿತ್ತು. ಅಂಥದರ ಅನುಭವವನ್ನು ಪರಿಚಯಿಸುವಂತೆ ತಮ್ಮ ಮೂರೂ ನಾಟಕಗಳನ್ನು ಗ್ರೀಕ್ ರುದ್ರ ನಾಟಕದ ರೀತಿಯಲ್ಲಿ ರಚಿಸಿದ್ದಾರೆ.

ನಾಗಚಂದ್ರ ಚಿತ್ರಿಸಿದ ರಾವಣನ ಪಾತ್ರದಲ್ಲಿ ಶ್ರೀಕಂಠಯ್ಯನವರು ದುರಂತ ನಾಯಕನ ಸಾಧ್ಯತೆಗಳನ್ನು ಗುರುತಿಸಿದಂತೆ ರನ್ನನ ಸಾಹಸ ಭೀಮ ವಿಜಯದಲ್ಲಿ ಅಂಥ ಮತ್ತೊಂದು ಸಾಧ್ಯತೆಯನ್ನು ಅಲ್ಲಿಯ ದುರ್ಯೋಧನನ ಪಾತ್ರದಲ್ಲಿ ಗುರುತಿಸಿದ್ದಾರೆ. ಆ ದೃಷ್ಟಿಯಿಂದಲೇ ರನ್ನನ ಚಂಪೂ ಕಾವ್ಯವನ್ನು ನಾಟಕವನ್ನಾಗಿ ಪರಿವರ್ತಿಸಿದ್ದಾರೆ. ಇಂಥ ಪರಿವರ್ತನೆ ಕಷ್ಟವಾಗಿರಲಿಲ್ಲ. ರನ್ನನ ಕಾವ್ಯದಲ್ಲಿಯೇ ನಾಟಕ ಸತ್ವವಿದೆ. ಸಂಭಾಷಣೆಗಳ ಮೂಲಕವೇ ಮುನ್ನಡೆಯುವ ಕ್ರಿಯೆ ಒಂದು ಪರಾಕಾಷ್ಠೆಯ ಸನ್ನಿವೇಶದಲ್ಲಿ ಪರ್ಯವಸಾನವಾಗುತ್ತದೆ. ನಾಟಕದಲ್ಲಿಯಂತೆ ಶೈಲಿ ವರ್ಣನೆಗಳಿಗೆ ಎಡೆಕೊಡದೆ ಶಕ್ತಿಯುತ

ಹಾಗೆ ಆಳತೆ ತಪ್ಪದೆ ಮುಂದುವರಿಯುತ್ತದೆ. ಕೆಲವೊಂದು ಚಿಕ್ಕಪುಟ್ಟ ಬದಲಾವಣೆಗಳನ್ನು ಮಾಡಿಕೊಂಡು ಕಾವ್ಯದ ಭಾಗಗಳನ್ನು ನಾಟಕ ಕ್ರಿಯೆಗೆ ಹೊಂದುವಂತೆ ಶ್ರೀಕಂಠಯ್ಯನವರು ಜೋಡಿಸಿಕೊಂಡಿದ್ದಾರೆ. ರನ್ನನ ಕಾವ್ಯದಲ್ಲಿಯೇ ಅಡಗಿಕೊಂಡಿದ್ದ ನಾಟಕವನ್ನು ಹೊರಗೆಳೆದಿದ್ದಾರೆ. ಮಾಡಿದ ಬದಲಾವಣೆಗಳು ಅಲ್ಪವಾದರೂ ನಾಟಕದ ಆಶಯದ ದೃಷ್ಟಿಯಿಂದ ಮಹತ್ವದುವಾಗಿವೆ. ಗದಾಯುದ್ಧವನ್ನು ಗ್ರೀಕ್ ಮಾದರಿಯ ನಾಟಕವನ್ನಾಗಿಸಿ ದುರ್ಯೋಧನನ್ನು ಒಂದು ದುರಂತ ಪಾತ್ರವನ್ನಾಗಿಸಿ ಚಿತ್ರಿಸುವುದು ಅವರ ಉದ್ದೇಶವಾಗಿತ್ತು.

ನಾಟಕಕ್ರಿಯೆ ಐದು 'ರಂಗ'ಗಳಲ್ಲಿ ನಡೆಯುತ್ತದೆ. ಭಾರತ ಯುದ್ಧದ ಕೊನೆಯಲ್ಲಿ ಧೃತರಾಷ್ಟ್ರನ ಮಕ್ಕಳಲ್ಲಿ ದುರ್ಯೋಧನ, ಕೌರವ ನಾಯಕರಲ್ಲಿ ಅಶ್ವತ್ಥಾಮ ಮಾತ್ರ ಉಳಿದಿರುತ್ತಾರೆ. ಊರುಭಂಗದ ಪ್ರತಿಜ್ಞೆಯನ್ನು ದ್ರೌಪದಿ ಭೀಮನಿಗೆ ನೆನಪು ಕೊಡುತ್ತಿರುವಂತೆ, ಕೃಷ್ಣ ಅದನ್ನು ಅನುಮೋದಿಸುತ್ತಿರುವಂತೆ ನಾಟಕ ಪ್ರಾರಂಭವಾಗುತ್ತದೆ. ಎರಡನೆಯ ರಂಗದಲ್ಲಿ ತನ್ನ ಕಡೆಯ ನಾಯಕರನ್ನಳಿದೆ ಪಾಂಡವರನ್ನು, ಕೃಷ್ಣನನ್ನು, ಹಳಿಯುತ್ತಿದ್ದ ದುರ್ಯೋಧನನನ್ನು ಧೃತರಾಷ್ಟ್ರ–ಗಾಂಧಾರಿಯರು ಸಂಧಾನ ಮಾಡಿಕೊಳ್ಳಬೇಕೆಂದು ಬೇಡುತ್ತಾರೆ. ಭೀಷ್ಮ ಹೇಳಿದ ಹಾಗೆ ನಡೆದುಕೊಳ್ಳುತ್ತೇನೆಂದು ದುರ್ಯೋಧನ ಮಾತುಕೊಡುತ್ತಾನೆ. ಭೀಷ್ಮನನ್ನು ಕಾಣುವುದಕ್ಕೆಂದು ಹೊರಟ ದುರ್ಯೋಧನನ್ನು ಯುದ್ಧ ಭೂಮಿಯಲ್ಲಿಯ ಹೆಣಗಳ ಮಧ್ಯದಲ್ಲಿಂದ ಮೂರು ಮರುಳುಗಳು ಎದುರಿಸಿ ಆತನ ಕೊನೆಯನ್ನು ಸೂಚಿಸುತ್ತವೆ. ಕರ್ಣ ದುಶ್ಶಾಸನರ ಮೃತದೇಹಗಳನ್ನು ಕಂಡು ದುರ್ಯೋಧನ ಶೋಕಿಸುತ್ತಾನೆ. ಸಂಧಾನದ ತನ್ನ ಸಲಹೆಯನ್ನು ದುರ್ಯೋಧನ ಒಪ್ಪದಿರುವಾಗ ಮೈತ್ರೇಯರ ಶಾಪದಿಂದ ಪಾರಾಗುವಂತೆ ಅಂದಿನ ಮಟ್ಟಿಗೆ ವೈಶಂಪಾಯನ ಸರೋವರದಲ್ಲಿ ಅಡಗಿರಬೇಕೆಂದು ಭೀಷ್ಮ ಹೇಳುತ್ತಾರೆ. ನಾಲ್ಕನೆಯ ದೃಶ್ಯದಲ್ಲಿ ಕೃಷ್ಣ ಮತ್ತು ಭೀಮ ಅಡಗಿಕೊಂಡಿದ್ದ ದುರ್ಯೋಧನನನ್ನು ಹುಡುಕಿಕೊಂಡು ಹೊರಡುತ್ತಾರೆ. ಕೊನೆಯ ದೃಶ್ಯ ನಾಟಕದ ಕೇಂದ್ರ. ಭೀಮನ ಮೂದಲಿಕೆಯನ್ನು ತಡೆಯಲಾಗದೆ ಹೊರಬಂದ ದುರ್ಯೋಧನ

ನೊಡನೆ ಗದಾಯುದ್ಧ ಪ್ರಾರಂಭವಾಗುತ್ತದೆ. ನೆಲಕ್ಕೆ ಬಿದ್ದ ಭೀಮನನ್ನು ಹೊಡೆಯುವುದು ಯುದ್ಧ ಧರ್ಮವಲ್ಲವೆಂದು ದುರ್ಯೋಧನ ಆತನಿಗೆ ಗಾಳಿ ಬೀಸಿ ಚೇತರಿಸಿಕೊಳ್ಳುವಂತೆ ಮಾಡುತ್ತಾನೆ. ಯುದ್ಧ ಮತ್ತೆ ಪ್ರಾರಂಭವಾದಾಗ ಕೃಷ್ಣ ಪ್ರತಿಜ್ಞೆಯನ್ನು ನೆನಪಿಸಿ ಕೊಡುವುದರಿಂದ ಭೀಮ ತೊಡೆಗೆ ಹೊಡೆದು ದುರ್ಯೋಧನನನ್ನು ಕೆಡಹುತ್ತಾನೆ. ಆತನ ಕಿರೀಟವನ್ನು ಒದೆಯುತ್ತಾನೆ. ಈ ಅಧರ್ಮದಿಂದಾಗಿ ಧರ್ಮರಾಯನಿಗೆ ಭೀಮನ ತಲೆಯ ಮೇಲೆ ಸೇಡುಮಾರಿಗಳು ಕಾಣಿಸಿಕೊಳ್ಳುತ್ತವೆ. ಅವುಗಳಿಂದಾಗಬಹುದಾದ ಅಪಾಯವನ್ನು ತಪ್ಪಿಸುವುದಕ್ಕೆಂದು ಅವರೆಲ್ಲರೂ ಶಿವಾರಾಧನೆಗಾಗಿ ನೀಲಾಚಲಕ್ಕೆ ತೆರಳುತ್ತಾರೆ.

ಇಲ್ಲಿಗೆ ನಾಟಕ ಮುಗಿಯಬಹುದಾಗಿತ್ತು. ಆದರೆ ಸಾಯುವುದರಲ್ಲಿದ್ದ ದುರ್ಯೋಧನನಿದ್ದಲ್ಲಿಗೆ ಅಶ್ವತ್ಥಾಮ ಭಕ್ತ್ರಿಯನ್ನು ಎಳೆತರುತ್ತಾನೆ. ಭೀಮನ ತಲೆಯನ್ನು ತಂದುದನ್ನು ನೋಡದೆ ಸಾಯಲಾರೆ ಎಂದ ದುರ್ಯೋಧನನಿಗೆ ಅಶ್ವತ್ಥಾಮ ಉಪ ಪಾಂಡವರ ತಲೆಗಳನ್ನು ತೋರಿಸಿದಾಗ ಆತ "ಇದೆಲ್ಲ ಕೃಷ್ಣನ ಮಾಯೆ. ದೈವದ ಮುಂದೆ ನಾವಲ್ಲ" ಎಂದು ಅಸು ನೀಗುತ್ತಾನೆ.

ನಾಟಕದ ಕ್ರಿಯೆ ಕಾವ್ಯದಲ್ಲಿಯ ಕ್ರಮವನ್ನು ಅನುಸರಿಸಿಯೇ ನಡೆಯುತ್ತದೆ. ಮಾತುಗಳಾದರೂ ಕಾವ್ಯದಲ್ಲಿಯವೇ. ಆದ್ದರಿಂದ ಸಂವಿಧಾನ ಹಾಗೂ ಸಂಭಾಷಣೆಗಳ ಶ್ರೇಯಸ್ಸು ರನ್ನನಿಗೇ ಸಲ್ಲುತ್ತದೆ. ಗ್ರೀಕ್ ನಾಟಕದ ಲಕ್ಷಣಗಳನ್ನು ಶ್ರೀಕಂಠಯ್ಯನವರು ಇಲ್ಲಿ ಗುರುತಿಸಿದರು. ಆ ಲಕ್ಷಣಗಳಲ್ಲಿ ಮುಖ್ಯವಾದ ಸ್ಥಳ ಕಾಲ ಕ್ರಿಯೆಗಳ ಐಕ್ಯ : ಒಂದೊಂದೇ ಗುಣ ವಿಶೇಷಗಳನ್ನು ಎತ್ತಿ ತೋರಿಸುವ ಪಾತ್ರ ಪೋಷಣೆಯ ರೀತಿ. ದೈವಹತವಾಗಿ ಕೇಂದ್ರ ಪಾತ್ರ ಕೊನೆಗಾಣುವ ದುರಂತ: ಸೇಡಿನ ಕೇಡನ್ನು ಎಸಗಿದವ ತನ್ನ ಮೇಲೆ ಸೇಡುಮಾರಿಗಳ ಕೋಪವನ್ನು ತಂದುಕೊಳ್ಳುವುದು. ಇವೆಲ್ಲವೂ ಇಲ್ಲಿವೆ. ಮೇಳವೊಂದನ್ನು ಯೋಜಿಸಿಕೊಂಡು ದುರ್ಯೋಧನನನ್ನು ದುರಂತ ನಾಯಕನನ್ನಾಗಿಸಿ, ನಡೆದ ದುರಂತ ರಂಗಸ್ಥಳದಾಚೆಗೆ ನಡೆಯುವಂತೆ ಮಾಡಿದ್ದರೆ ಒಂದು ಗ್ರೀಕ್ ಮಾದರಿಯ ದುರಂತ ನಾಟಕ ಪೂರ್ತಿಯಾಗಿ ರೂಪುಗೊಳ್ಳಬಹುದಿತ್ತು.

ಈ ಮೂರರಲ್ಲಿ ಮೊದಲನೆಯದನ್ನು ಮಾಡಬಹುದಿತ್ತು. ಶ್ರೀಕಂಠಯ್ಯನವರು ಮನಸ್ಸು ಮಾಡಲಿಲ್ಲ. ಮೂರನೆಯದನ್ನು ಮಾಡುವುದು ಅಸಾಧ್ಯವಿದ್ದಿತು—ಅದೇ ನಾಟಕದ ಕೇಂದ್ರ ಕ್ರಿಯೆಯಾದ್ದರಿಂದ. ಇನ್ನುಳಿದದ್ದು ದುರ್ಯೋಧನನನ್ನು ದುರಂತ ನಾಯಕನನ್ನಾಗಿ ಚಿತ್ರಿಸುವುದು. ಅಂಥ ಒಂದು ಪ್ರಯತ್ನ ಇಲ್ಲಿ ನಡೆದಿದೆ. ಅದರ ಪೂರ್ತಿಯಾದ ಯಶಸ್ಸಿಗೆ ಆಯ್ದುಕೊಂಡ ಕಥಾಮೂಲವೇ ಆತಂಕವಾಗಿದೆ.

ಕಾವ್ಯದ ಕಥಾನಾಯಕ ಭೀಮ ಎನ್ನುವುದರಲ್ಲಿ ಸಂದೇಹಕ್ಕೆ ಆಸ್ಪದವೇ ಇಲ್ಲ. ನಾಟಕ ಕ್ರಿಯೆ ರನ್ನನ ಕಥಾನಕವನ್ನೇ ಉದ್ದಕ್ಕೂ ಅನುಸರಿಸಿಕೊಂಡು ಹೋಗುವುದರಿಂದ ಭೀಮನನ್ನು ನಾಯಕ ಸ್ಥಾನದಿಂದ ಸರಿಸಿ ಅಲ್ಲಿ ದುರ್ಯೋಧನನನ್ನು ಇರಿಸುವುದು ಅಸಾಧ್ಯವಾದ್ದರಿಂದ ನಾಟಕಕಾರರಿಗೆ ಉಳಿದಿದ್ದ ಅವಕಾಶವೆಂದರೆ ದುರ್ಯೋಧನನನ್ನು ನಾಯಕನನ್ನಲ್ಲದಿದ್ದರೂ ಪ್ರತಿನಾಯಕನನ್ನಾಗಿ ಮಾಡಿ, ಆತನ ಗುಣಗೌರವವನ್ನು ಎತ್ತರಿಸಿ ಆತನ ಪತನಕ್ಕೆ ದುರಂತ ಸ್ವರೂಪವನ್ನು ಕೊಡುವುದು. ದುರ್ಯೋಧನನನ್ನು ಈ ರೀತಿ ಮೇಲಕ್ಕೆತ್ತಬೇಕಾದಾಗ ಭೀಮನ ಪಾತ್ರವನ್ನು ಕೆಲಮಟ್ಟಿಗೆ ತಗ್ಗಿಸಬೇಕಾಗುವುದು ಅನಿವಾರ್ಯವಾಗುತ್ತದೆ. ಶ್ರೀಕಂಠಯ್ಯನವರು ಹಾಗಾಗುವಂತೆ ಬದಲಾವಣೆಗಳನ್ನು ಮಾಡಿದ್ದಾರೆ. ದುರ್ಯೋಧನನ ಪಾತ್ರವನ್ನು ಮೇಲಕ್ಕೆತ್ತುವ ಪ್ರಯತ್ನ ಮಾಡಿದ್ದಾರೆ. ಆದ್ದರಿಂದ ನಾಯಕನೇ ಆಗಲಿ, ಪ್ರತಿನಾಯಕನೇ ಆಗಲಿ, ನಾಟಕದಲ್ಲಿಯ ದುರ್ಯೋಧನ ಎಷ್ಟರ ಮಟ್ಟಿಗೆ ಒಂದು ದುರಂತ ಪಾತ್ರವಾಗಿದ್ದಾನೆ ಎನ್ನುವುದು ಇಲ್ಲಿಯ ಮುಖ್ಯ ವಿಚಾರವಾಗುತ್ತದೆ.

ರನ್ನನಿಗೆ ಭೀಮ ನಾಯಕನಾದರೂ ದುರ್ಯೋಧನನ ವಿಷಯದಲ್ಲಿ ಸಹಾನುಭೂತಿ ಇದೆ. ಆತನನ್ನು ದುರಂತ ಪಾತ್ರವನ್ನಾಗಿ ಕಾಣಬಹುದೆಂಬ ಪ್ರೇರಣೆ ಶ್ರೀಕಂಠಯ್ಯನವರಿಗೆ ಅಲ್ಲಿಂದಲೇ ಸಿಕ್ಕಿರಬಹುದು. ಮುಖ್ಯವಾಗಿ ಉನ್ನತ ಸ್ಥಾನದಿಂದ ಪತನ ಹೊಂದುವವ : ತನ್ನಲ್ಲಿಯ ಸ್ವಭಾವ ದೋಷದ ಪರಿಣಾಮವಾಗಿ ಅಂತೆಯೇ ಪ್ರತಿಕೂಲ ದೈವದಿಂದ ಸಂಕಟಕ್ಕೆ ಈಡಾಗುವವ ಅವನೇ. ಪ್ರತಿಕೂಲ ದೈವವೆನ್ನಬಹುದಾದದ್ದು ಕೂಡ ಆತನ ಕೃತಿಯ

ಪರಿಣಾಮವೇ ಆಗಿದ್ದಿತು. ತನ್ನ ಹೆಮ್ಮೆಯನ್ನು ಕೊಚ್ಚಿಕೊಂಡು ಮೈತ್ರೇ
ಯರ ಎದುರು ತೊಡೆಯನ್ನು ತಟ್ಟಿಕೊಂಡದಕ್ಕೆಯೆ ಅವರು ಶಾಪ ಕೊಟ್ಟಿದ್ದರು.
ಇದೆಲ್ಲವೂ ಕೆಲಮಟ್ಟಿಗೆ ಆತನನ್ನು ದುರಂತ ಪಾತ್ರವನ್ನಾಗಿಸುತ್ತದೆ. ಆದರೆ
ದುರಂತ ನಾಯಕನಲ್ಲಿರಬೇಕಾದ ಔನ್ನತ್ಯ, ಒಳಿತಿನೆಡೆಗೋ, ಕೆಡಕಿನೆಡೆಗೋ
ನಡಸಬಲ್ಲ ಒಂದು ಹಿರಿಯ ಕ್ರಿಯಾಸತ್ವ ಆತನಲ್ಲಿ (ಇಲ್ಲಿಯ ಕಥಾಯೋಜನೆ
ಯಲ್ಲಿ) ಕಾಣಸಿಕ್ಕುವುದಿಲ್ಲ.

ಕೌರವ ಚಕ್ರವರ್ತಿ ಎಂಬ ಘನವಾದ ಸ್ಥಾನ ಅವನದಾಗಿದ್ದರೂ ಅದು
ಸ್ಥಾನದ ಘನತೆಯೇ ಹೊರತು ಗುಣದ್ದಲ್ಲ. ಅಲಿದ್ದು ಆತ ಮಾಡಿದ್ದು ಒಂದೇ–
ಪಾಂಡವರ ಅಪಮಾನ, ದ್ವೇಷ, ಯುದ್ಧ. ಸಂಧಾನ ಮಾಡಿಕೊಳ್ಳುವಹಾಗಿಲ್ಲ
ಎಂಬ ಛಲ ಆತನಲ್ಲಿಯ ಧೈರ್ಯಕ್ಕೆ ಸಾಕ್ಷಿಯಾಗಬಹುದಾದಂತೆ ಆತನಲ್ಲಿಯ
ದುರಹಂಕಾರಕ್ಕೂ ಸಾಕ್ಷಿಯಾಗುತ್ತದೆ. ಆತನ ಧೈರ್ಯವಾಗಲಿ, ಛಲವಾಗಲಿ
ಕ್ರಿಯಾಮುಖಿಯಾಗುವುದಿಲ್ಲ. ಎದುರಾಳಿಗಳನ್ನು ಹೀನಾಯವಾಗಿ ಕಾಣುವುದು,
ಕರ್ಣ ದುಶ್ಶಾಸನರಿಗಾಗಿ ಶೋಕಿಸುವುದು. ಇವೆರಡನ್ನುಳಿದು ಆತ ಏನನ್ನೂ
ಮಾಡುವುದಿಲ್ಲ. ಅಭಿಮನ್ಯುವಿನ ವೀರಕ್ಕೆ ಗೌರವ ತೋರುವ ಔದಾರ್ಯ,
ಕೊನೆಯಲ್ಲಿ ಅಶ್ವತ್ಥಾಮನಿಗೆ ಹೇಳುವ ಪ್ರಾಯಶ್ಚಿತ್ತದ ವಿಚಾರ, ಇದೆಲ್ಲವೂ
ದೈವದಾಟ ಎಂದು ಗುರುತಿಸುವ ವಿವೇಕ ಆತನಲ್ಲಿವೆಯಾದರೂ ಈ ಯಾವುದೂ
ಆತನನ್ನು ಅಸಾಮಾನ್ಯತೆಯ ಎತ್ತರಕ್ಕೇರಿಸುವುದಿಲ್ಲ. ಅವನ ಬಗೆಯಲ್ಲಿ
ಕನಿಕರವನ್ನು ಹುಟ್ಟಿಸುತ್ತವೆಯೇ ಹೊರತು ಈತ ಘನವಂತ, ಇಂಥವನಿಗೆ ಈ
ಗತಿ ಬರಬಾರದಾಗಿತ್ತು ಎಂದುಕೊಳ್ಳುವಂತೆ ಮಾಡುವುದಿಲ್ಲ.

ಆತ ಉದಾತ್ತನೆಂದು ತೋರಿಸುವುದಕ್ಕೆ ರನ್ನ ಮಾಡಿದ ಒಂದು ಪ್ರಯತ್ನ
ನಾಟಕದಲ್ಲಿಯೂ ಉಳಿದು ಬಂದಿದೆ. ಗದಾಯುದ್ಧದ ಸಂದರ್ಭದಲ್ಲಿ ಭೀಮ
ಬಿದ್ದಾಗ ಆತ ಮತ್ತೆ ಚೇತರಿಸಿಕೊಳ್ಳುವಂತೆ ಮಾಡುವುದು ಆತನ ಧರ್ಮ
ಬುದ್ಧಿಯ ಔದಾರ್ಯ ಎಂಬ ಸೂಚನೆ ಇದೆ. ಆದರೆ ಅಂಥ ಔದಾರ್ಯ
ದುರ್ಯೋಧನನಲ್ಲಿ ಸಂಭಾವ್ಯವಾಗಿ ಕಾಣುವುದಿಲ್ಲ. ವಿಷಾನ್ನ ಹಾಕಿದವ,
ಅರಗಿನ ಮನೆಯಲ್ಲಿ ಸುಟ್ಟು ಬಿಡಬೇಕೆಂದವ, ದ್ರೌಪತಿಗೆ ತೊಡೆಯನ್ನು

ತೋರಿಸಿದವ ಇದ್ದಕ್ಕಿದ್ದಹಾಗೆ ಇಂಥ ಧರ್ಮಬುದ್ಧಿಯನ್ನು ತೋರಿಸಲಾರ. ಅವೆಲ್ಲ ಎಂದೋ ನಡೆದ ಸಂಗತಿಗಳೆನ್ನುವಹಾಗಿಲ್ಲ. ನಾಟಕದಲ್ಲಿ ಉದ್ದಕ್ಕೂ ತನ್ನ ದುಷ್ಕೃತ್ಯಗಳನ್ನು ಹೆಮ್ಮೆಯಿಂದ ನೆನೆದುಕೊಳ್ಳುತ್ತಾನೆ. ಕ್ಷಣ ಮಾತ್ರದ ಹಿಂದೆ ಭೀಮನನ್ನು ದುಶ್ಶಾಸನನನ್ನು ಕೊಂದ ಪಿಶಾಚಿ ಎಂದು ಆಕ್ರೋಶಿಸಿದ್ದಾನೆ. ಆದ್ದರಿಂದ ದುರ್ಯೋಧನನಲ್ಲಿ ಆಗ ಕಾಣಿಸಿಕೊಳ್ಳುವ ಧರ್ಮಬುದ್ಧಿ ರನ್ನ ಆರೋಪಿಸಿದ್ದು ಎಂದು ಹೇಳಬೇಕಾಗುತ್ತದೆ. ನಾಟಕಕಾರರು ಅದನ್ನು ಉಳಿಸಿಕೊಂಡಿದ್ದಾರೆ. ಆದರೆ ಅಪೇಕ್ಷಿಸಿದಂತೆ ಅದು ನೈಜವಾದ ಪರಿಣಾಮವನ್ನುಂಟುಮಾಡುವುದಿಲ್ಲ. ಹೀಗೆ ದುರ್ಯೋಧನನ ಪಾತ್ರವನ್ನು ಎತ್ತರಿಸುವ ಯತ್ನದಲ್ಲಿ ಭೀಮನಿಗೆ ಕೆಲಮಟ್ಟಿಗೆ ಅನ್ಯಾಯವಾಗಿದೆ. ಭೀಮ ಎಂದಿಗಾದರೂ ಶೀಘ್ರಕೋಪಿಯಾದರೂ ಧರ್ಮರಾಯನ ವಿಷಯದಲ್ಲಿ ಅವಿನಯ ತೋರಿದವನಲ್ಲ. ಮೂಲದಲ್ಲಿ "ಇಂದಿನ ಒಂದು ದಿನ ನೀನು ನನಗೆ ಗುರುವಲ್ಲ" ಎಂದು ಹೇಳುವ ಮುಂಚೆ ಅತನಿಗೆ ಸಾಷ್ಟಾಂಗ ನಮಸ್ಕರಿಸುತ್ತಾನೆ. ಗದಾಯುದ್ಧದ ಸಂದರ್ಭದಲ್ಲಿ ಹೊರಬಂದ ದುರ್ಯೋಧನನನ್ನು ಕಂಡು ಮೆಚ್ಚಿ ತಲೆದೂಗುತ್ತಾನೆ. ಗದೆಯನ್ನೆತ್ತಿಕೊಳ್ಳುವ ಮೊದಲು ಗುರುಗಳಾಗಿದ್ದ ದ್ರೋಣಾಚಾರ್ಯರನ್ನು ನೆನೆಯುತ್ತಾನೆ. ನಾಟಕದಲ್ಲಿ ಈ ಎಲ್ಲ ಸಣ್ಣಪುಟ್ಟ ವಿವರಣೆಗಳನ್ನು ಬಿಟ್ಟುಕೊಟ್ಟದ್ದರಿಂದ ಭೀಮ ಬರೀ ಸೇಡುಬುದ್ಧಿಯ ಅವಿನೀತನಾಗಿ ಕಾಣುತ್ತಾನೆ. ನಾಟಕದಲ್ಲಿ ಕೃಷ್ಣನ ಪಾತ್ರದಲ್ಲಿಯಾದರೂ ಮಹೋನ್ನತಿ ಕಾಣುವುದಿಲ್ಲ. ಉದ್ದಕ್ಕೂ ಅತ ಮಾಡಿದ ಒಂದೇ ಒಂದು ಕೆಲಸವೆಂದರೆ ಭೀಮನನ್ನು ಪ್ರಚೋದಿಸುವುದು.

ಗ್ರೀಕ್ ಮಾದರಿಯ ದುರಂತ ನಾಟಕವೊಂದನ್ನು ರನ್ನನ ಕೃತಿಯನ್ನು ಆಧರಿಸಿ ರಚಿಸಬೇಕೆಂಬ ಶ್ರೀಕಂಠಯ್ಯನವರ ಆಕಾಂಕ್ಷೆ ಇಲ್ಲಿ ಕೆಲಮಟ್ಟಿಗೆ ಮಾತ್ರ ಈಡೇರಿದೆ. ಭೀಮನ ಸಾಹಸವನ್ನು ಕೊಂಡಾಡುವ ಉದ್ದೇಶದಿಂದ ರಚಿತವಾದ ಕಾವ್ಯವನ್ನು ಮೂಲವಾಗಿಸಿಕೊಂಡು ಅದನ್ನು ಅನುಸರಿಸಿಯೇ ನಾಟಕವನ್ನು ರೂಪಿಸಿರುವುದರಿಂದ ಆಕಾಂಕ್ಷೆ ಪೂರ್ತಿಯಾಗಿ ಈಡೇರುವುದಿಲ್ಲ. ರಚನೆ ರೀತಿಗಳಲ್ಲಿ, ಒಂದು ಆವೇಶದ ಮಟ್ಟದಲ್ಲಿಯೇ ನಡೆಯುವ ಶೈಲಿಯ ಶಕ್ತಿಯಲ್ಲಿ, ಗ್ರೀಕ್ ನಾಟಕದ ಲಕ್ಷಣಗಳು ತಾವಾಗಿಯೇ ಬಂದಿವೆ. ಎಲ್ಲಕ್ಕೂ

ಮುಖ್ಯವಾಗಿ ಮನುಷ್ಯನಲ್ಲಿಯ ಅಹಂಕಾರವುದವೇ ದುರಂತಮೂಲ ಎಂಬ ಗ್ರೀಕ್ ನಾಟಕಗಳ ವಿಚಾರಸರಣಿಗೆ ಈ ನಾಟಕ ಒಂದು ನಿದರ್ಶನವಾಗುತ್ತದೆ. "ದೈವದ ಮುಂದೆ ನಾವಲ್ತು" ಎಂಬ ದುರ್ಯೋಧನನ ಕೊನೆಯ ಮಾತು ಶ್ರೀಕಂಠಯ್ಯನವರು ಸೇರಿಸಿದ್ದು. ದೈವದ ಅಧಿಪತ್ಯವನ್ನು ಒತ್ತಿ ಹೇಳುವ ಈ ಮಾತಾದರೂ ಅದನ್ನು ಗ್ರೀಕ್ ನಾಟಕದ ಪರಂಪರೆಗೆ ಹತ್ತಿರವಾಗಿಸುತ್ತದೆ.

(೧೦)

"ಗದಾಯುದ್ಧ" ಪ್ರಕಟವಾದ ಮೂರು ವರ್ಷಗಳ ನಂತರ ಶ್ರೀಕಂಠಯ್ಯನವರು ೧೯೨೯ರಲ್ಲಿ "ಅಶ್ವತ್ಥಾಮನ್" ನಾಟಕವನ್ನು ಬರೆದು ಪ್ರಕಟಿಸಿದರು. ಗ್ರೀಕ್ ಮಾದರಿಯ ದುರಂತ ನಾಟಕವೊಂದನ್ನು ಕನ್ನಡಕ್ಕೆ ಕೊಡಬೇಕೆಂಬ ಅವರ ಆಕಾಂಕ್ಷೆ ಇಲ್ಲಿ ಪೂರ್ತಿಯಾಗಿ ಸಫಲವಾಗಿದೆ. ರಚನಾ ವಿಧಾನದಲ್ಲಿ, ಕಾವ್ಯಶಕ್ತಿಯಲ್ಲಿ, ಸಮರ್ಥವಾದ ಭಾಷಾಪ್ರಯೋಗದಲ್ಲಿ, ದುರಂತಾನುಭವದ ಅಂಗವಾಗಿ ಒಂದು ಉದಾತ್ತವಾದ ಜೀವನ ದರ್ಶನವನ್ನು ಒದಗಿಸುವುದರಲ್ಲಿ ಇದನ್ನು ಸರಿಗಟ್ಟುವ ಇನ್ನೊಂದು ನಾಟಕ ಕನ್ನಡದಲ್ಲಿಲ್ಲ. ಇದನ್ನು ಸೊಫೊಕ್ಲೀಸನ "ಐಜಾಕ್ಸ್" ನಾಟಕದ ಭಾರತೀಯ ರೂಪಾಂತರವೆಂದು ಹೇಳಬಹುದಾದಂತೆ ಇದೊಂದು ಸ್ವತಂತ್ರ ನಾಟಕವೆಂದೂ ಹೇಳಬಹುದಾಗಿದೆ. ಹೇಳದಿದ್ದರೆ ರೂಪಾಂತರವೆಂದು ಗೊತ್ತಾಗದ ಮಟ್ಟಿಗಿನ ಸ್ವಯಂಪೂರ್ಣತೆಯನ್ನು ಅದು ಸಾಧಿಸಿದೆ.

ಐಜಾಕ್ಸನ ಕಥೆಯನ್ನು ಮಹಾಭಾರತದ ಸೌಪ್ತಿಕ ಪರ್ವದಲ್ಲಿಯ ಅಶ್ವತ್ಥಾಮನ ವೃತ್ತಾಂತಕ್ಕೆ ಹೊಂದಿಸಿಕೊಂಡು ಅತನನ್ನು ಕುರಿತಂತೆ ದುರಂತ ನಾಟಕವನ್ನು ರೂಪಿಸಿರುವುದು ಇಲ್ಲಿಯ ಕಾರ್ಯವಿಧಾನ. ಎರಡು ಕಥೆಗಳಲ್ಲಿ ಕೆಲಮಟ್ಟಿಗೆ ಸಾಮ್ಯವಿದೆ. ವ್ಯತ್ಯಾಸಗಳೂ ಇವೆ. ನಾಟಕದ ರಚನೆ ಗ್ರೀಕ್ ಮೂಲವನ್ನು ಅನುಸರಿಸಿಕೊಂಡು ಹೋಗುವುದರಿಂದ ಇಲ್ಲಿಯ ನಾಟಕ ಎರಡು ಕಡೆಯಿಂದ ಶಕ್ತಿಯನ್ನು ಪಡೆಯುತ್ತದೆ. ಟ್ರೋಜನ್ ಯುದ್ಧ ಮುಗಿದಾಗ ಮಡಿದ ವೀರ ಆಕಿಲಿಸನ ಶ್ಯೈಗಾಪ್ತ ಸಮಾನ ವೀರನೆನಿಸಿಕೊಂಡಿದ್ದ ತನಗೆ ಬರದೆ ಅನ್ಯಾಯವಾಗಿ ಒಡಿಸ್ಸಿಯಸ್ಸನಿಗೆ ಹೋದದ್ದರಿಂದ ತೀರ ಅಸಮಾಧಾನಗೊಂಡ ಐಜಾಕ್ಸ್ ಅದನ್ನು ಪಡೆದವನನ್ನೂ ಕೊಡಿಸಿದ ಸೇನಾ

ನಾಯಕರನ್ನೂ ಕೊಲೆಗೈದು ಸೇಡು ತೀರಿಸಿಕೊಳ್ಳಬೇಕೆಂದಾಗ ಒಡಿಶಿಯಸ್‌ನಿಗೆ ಪ್ರಿಯ ದೇವತೆಯಾಗಿದ್ದ ಪಾಲಸ್‌ಅಥೆನಿ ಅದನ್ನು ತಪ್ಪಿಸುವುದಕ್ಕೆಂದು ಏಜಾಕ್ಸನ ಮೇಲೆ ಮಾಯೆಯನ್ನು ಬೀಸುತ್ತಾಳೆ. ಆತ ಸೇನಾನಾಯಕರನ್ನೇ ಕೊಲ್ಲುತ್ತಿದ್ದೇನೆಂಬ ಭ್ರಮೆಯಲ್ಲಿ ಪಾಳೆಯದಲ್ಲಿಯ ಮೂಕ ಪ್ರಾಣಿಗಳನ್ನು ಕೊಲ್ಲುತ್ತಾನೆ. ಕವಿದ ಮಂಕು ಸರಿದಾಗ ತನ್ನ ಕೃತ್ಯಕ್ಕೆ ತಾನೇ ಹೇಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ನಾಯಕರ ಕೊಲೆಗೆಳಸಿದವ ದ್ರೋಹಿ ಎಂದು ಆತನ ವಿಧಿಪೂರ್ವಕವಾದ ಅಂತ್ಯ ಸಂಸ್ಕಾರವನ್ನು ಅಗೆಮೆಮ್ನಾನ್ ಮತ್ತು ಮೆನಿಲಾಸ್ ವಿರೋಧಿಸುತ್ತಾರೆ. ಒಡಿಶಿಯಸ್‌ನೇ ಮಧ್ಯೆ ಪ್ರವೇಶಿಸಿ ವೀರನಿಗೆ ಯಥೋಚಿತವಾಗಿ ಸಂಸ್ಕಾರಗಳು ನಡೆಯುವಂತೆ ಮಾಡುತ್ತಾನೆ. ಇದು ಸೊಫೋಕ್ಲೀಸ್ ನಾಟಕದ ಕಥೆ. ಊರುಭಂಗದ ನಂತರ ಸಾಯುವುದರಲ್ಲಿದ್ದ ದುರ್ಯೋಧನನನ್ನು ಕಂಡು ಅಧರ್ಮದಿಂದ ಭೀಮ ಆತನ ತೊಡೆಯನ್ನು ಮುರಿದದ್ದರಿಂದ ಸೇಡು ತೀರಿಸಿಕೊಳ್ಳಬೇಕೆಂದ ಅಶ್ವತ್ಥಾಮ ರಾತ್ರಿಯ ಸಮಯದಲ್ಲಿ ಪಾಂಡವರ ಪಾಳಯವನ್ನು ಹೊಕ್ಕು ನಿದ್ರೆಯಲ್ಲಿದ್ದ ಪಾಂಚಾಲರನ್ನು ಉಪಪಾಂಡವರನ್ನೂ ಸಂಹರಿಸುತ್ತಾನೆ. ಇದನ್ನು ತಿಳಿದು ಭೀಮ, ಕೃಷ್ಣ, ಅರ್ಜುನ ಆತನನ್ನು ಬೆನ್ನಟ್ಟಿದಾಗ ಅಶ್ವತ್ಥಾಮ ದಿವ್ಯಾಸ್ತ್ರವನ್ನು ಬಿಡುತ್ತಾನೆ. ಅರ್ಜುನ ಪ್ರತ್ಯಸ್ತ್ರವನ್ನು ಬಿಟ್ಟಾಗ ಲೋಕ ಸುಟ್ಟುಹೋಗುವಂತಾಗುತ್ತದೆ. ವ್ಯಾಸ ನಾರದರ ಬೇಡಿಕೆಯಂತೆ ಅರ್ಜುನ ತನ್ನ ಅಸ್ತ್ರವನ್ನು ಹಿಂತೆಗೆದುಕೊಳ್ಳುತ್ತಾನೆ. ಅಶ್ವತ್ಥಾಮ ಒಪ್ಪುವುದಿಲ್ಲ. ಮೂರು ಸಾವಿರ ವರ್ಷ ಮನುಷ್ಯ ಸಹವಾಸವಿಲ್ಲದೆ ಅಲೆಯುತ್ತಿರುವಂತೆ ಕೃಷ್ಣ ಆತನಿಗೆ ಶಾಪ ಹೇಳುತ್ತಾನೆ. ಆತನ ತಲೆಯಲ್ಲಿಯ ಮಣಿಯನ್ನು ತೆಗೆದುಕೊಂಡು ಮೂವರೂ ಹಿಂದಿರುಗುತ್ತಾರೆ. ಇದು ಮಹಾಭಾರತದಲ್ಲಿಯ ಕಥೆ.

ಏಜಾಕ್ಸ್ ಒಂದು ಕಾರಣಕ್ಕಾದರೆ ಅಶ್ವತ್ಥಾಮ ಇನ್ನೊಂದು ಕಾರಣಕ್ಕಾಗಿ ನಿರಪರಾಧಿಗಳ ಕಗ್ಗೊಲೆಯನ್ನು ಮಾಡಿ ಒಂದೊಂದು ರೀತಿಯ ದುರಂತದಲ್ಲಿ ತಮ್ಮ ಬದುಕನ್ನು ಕೊನೆಗೊಳಿಸುತ್ತಾರೆ ಎನ್ನುವುದು ಈ ಎರಡು ಕಥೆಗಳಲ್ಲಿಯ ಸಮಾನಾಂಶ. ಗ್ರೀಕ್ ನಾಟಕದಲ್ಲಿಯ ಪಾತ್ರವರ್ಗವನ್ನು ಇಲ್ಲಿಯ ಕಥೆಗೆ

ಹೊಂದಿಸಿಕೊಳ್ಳಲಾಗಿದೆ. ಏಜಾಕ್ಸ್ ಅಶ್ವತ್ಥಾಮನಾಗುತ್ತಾನೆ. ಆತ ಬನವಾಸಿ ಯುವನೆಂದೂ ತಂದೆಯೊಡನೆ ಕೌರವರ ಆಶ್ರಯ ಪಡೆದವನೆಂದೂ ಕಲ್ಪಿಸಲಾಗಿದೆ. ಅದೇ ಪ್ರದೇಶಕ್ಕೆ ಸೇರಿದವನೆಂದ ಏಕಲವ್ಯ (ಗ್ರೀಕ್ ನಾಟಕದ ಟ್ಯೂಸರ್-ಏಜಾಕ್ಸನ ಮಲತಮ್ಮ) ಗುರುಗಳಿಗೆ ಬೆಂಬಲವೆಂದು ತನ್ನ ಬೇಡರ ಪಡೆಯೊಂದಿಗೆ ಬಂದಿದ್ದಾನೆ. ಮೂಲದಲ್ಲಿಯ ಸಾಲಾಮಿಸ್ ನಾವಿಕರಿಗೆ ಪ್ರತಿಯಾಗಿ ಈ ಬೇಡರೇ ಮೇಳದವರಾಗುತ್ತಾರೆ. ಮಹಾಭಾರತದ ಅಶ್ವತ್ಥಾಮ ಬ್ರಹ್ಮಚಾರಿ. ಆದರೆ ನಾಟಕದಲ್ಲಿ ಏಜಾಕ್ಸನ ಮಗ ಯೂರಿಸಾಕಿಸ್‌ನಿಗೆ ಸಮನಾಗಿ ಅಶ್ವತ್ಥಾಮನಿಗೆ ರುದ್ರಶಕ್ತಿ ಎಂಬ ಮಗನಿದ್ದಾನೆ. ಏಜಾಕ್ಸನ ದಾಸಿ-ಪ್ರೇಯಸಿಯಾಗಿದ್ದ ಟೆಕ್‌ಮೆಸಾಳಿಗೆ ಪ್ರತಿಯಾಗಿ ಅಶ್ವತ್ಥಾಮನನ್ನು ಎಳೆತನದಲ್ಲಿ ಸಲುಹಿದ ಅಜ್ಜಿ. ಪರಶುರಾಮನ ತಂಗಿ, ಭಾರ್ಗವಿಯ ಪಾತ್ರವನ್ನು ಯೋಜಿಸಲಾಗಿದೆ. ಮೆನಿಲಾಸ್ ಆಗೆಮೆಮ್ನಾನ್ ಇಬ್ಬರೂ ಭೀಮನಲ್ಲಿ ಸೇರಿಕೊಳ್ಳುತ್ತಾರೆ. ಒಡೀಸಿಯಸ್ ಕೃಷ್ಣನಾಗುತ್ತಾನೆ. ಪಾಲಾಸ್ ಅಥೆನಿ ರುದ್ರನಾಗಿ ಪರಿವರ್ತನೆಯನಾಗುತ್ತಾಳೆ. ಈ ಬಗೆಯ ಪಾತ್ರ ಯೋಜನೆಯಿಂದ ನಾಟಕದ ಸನ್ನಿವೇಶ ಹಾಗೂ ವಾತಾವರಣ ತತ್‌ಕ್ಷಣದಲ್ಲಿ ಭಾರತದ್ದಾಗಿ ಪರಿಣಮಿಸುತ್ತದೆ. ನಾಟಕಕ್ಕೆ ಸ್ವಾಯತ್ತತೆಯನ್ನು ತಂದುಕೊಡುತ್ತದೆ.



(೧) ಪಾಂಡವರ ಪಾಳಯದಲ್ಲಿ ರಾತ್ರಿ ನಡೆದ ಕೊಲೆಯನ್ನು ಮಾಡಿದವರು ಯಾರು ಎಂದು ಹುಡುಕುತ್ತ ಹೊರಟಿದ್ದ ಕೃಷ್ಣನನ್ನು ಸಂಧಿಸಿದ ರುದ್ರ ಪಾಂಡವರೆಲ್ಲರ ಕೊಲೆಗಾಗಿ ಅಶ್ವತ್ಥಾಮ ಬೇಡಿದ ವರವನ್ನು ತಾನು ನಿರಾಕರಿಸಿದಾಗ ಆತ ತನ್ನ ಮಾಯೆಯಿಂದ ಉನ್ಮತ್ತನಾಗಿ ಹೆಂಗಸರು, ಪಶುಗಳು ಮುಂತಾದವರನ್ನು ಕೊಂದನೆಂದು ತಿಳಿಸುತ್ತಾನೆ. ಇನ್ನೂ ಉನ್ಮತ್ತಾವಸ್ಥೆಯಲ್ಲಿದ್ದ ಅಶ್ವತ್ಥಾಮನನ್ನು ಕೃಷ್ಣನಿಗೆ ತೋರಿಸುತ್ತಾನೆ. ಅಹಂಕಾರ ಮತ್ತನಾಗಿ ದೇವತೆಗಳನ್ನು ಧಿಕ್ಕರಿಸುವ ಮನುಷ್ಯನನ್ನು ಅವರು ಮುರಿಯುತ್ತಾರೆ ಎಂದು ಹೇಳುತ್ತಾನೆ (೨) ಅಂಥ ಘೋರ ಕೃತ್ಯವನ್ನು ಅಶ್ವತ್ಥಾಮ ಮಾಡಿರಲಾರನೆಂದು ಸಂದೇಹ ಪಡುತ್ತಿದ್ದ ಮೇಳದವರಿಗೆ ಭಾರ್ಗವಿ ಅದನ್ನು ಮಾಡಿದವ ಅಶ್ವತ್ಥಾಮನೆಂದೂ. ಅದಕ್ಕಾಗಿ ಪಶ್ಚಾತ್ತಾಪದಿಂದ ಏನೋ ಕೆಟ್ಟ ಯೋಜನೆಯಲ್ಲಿರುವ ಆತನನ್ನು ಸಂತೈಸಬೇಕೆಂದೂ ಕೇಳುತ್ತಾಳೆ. (೩) ಅಶ್ವತ್ಥಾಮ

ತಾನು ಕೊಂದ ಪಶುಗಳ ನಡುವೆ ಪರಿತಪಿಸುತ್ತ ಇಂಥ ದುಷ್ಕೃತ್ಯವನ್ನು ಮಾಡಿದ ತನಗೆ ಮರಣವೇ ಸರಿ ಎಂದು ನಿಶ್ಚಯಿಸಿಕೊಳ್ಳುತ್ತಾನೆ. ತನ್ನ ತಾಯ್ನಾಡಾದ ಕನ್ನಡವನ್ನೂ, ನೆಲೆಸಿದ ನಾಡಾದ ಕುರುಕ್ಷೇತ್ರವನ್ನೂ ಸ್ಮರಿಸಿ ವ್ಯಥೆಪಟ್ಟು, ಮಗ ರುದ್ರ ಶಕ್ತಿಯನ್ನು ಕರೆಸಿ ಹರಸಿ ಎಲ್ಲರನ್ನೂ ಏಕಲವ್ಯ ರಕ್ಷಿಸುವನೆಂದು ಹೇಳಿ ಹೋಗುತ್ತಾನೆ. (೪) ಮೇಳದವರು ಜನಪಾಸಿಯ ಸುಖ ವನ್ನೂ ಪ್ರಕೃತದಲ್ಲಿಯ ಕಷ್ಟವನ್ನು ನೆನೆದುಕೊಂಡು ಶೋಕಿಸುತ್ತಾರೆ. (೫) ಇವರಿಂದ ತಪ್ಪಿಸಿಕೊಂಡು ಹೋಗುವುದಕ್ಕೆಂದು ಅಶ್ವತ್ಥಾಮ, ತಾನು ಭಾರ್ಗವಿಗಾಗಿ ಮರುಗಿದೆನೆಂದೂ ತೀರ್ಥಯಾತ್ರೆಯಿಂದ ಕಳಂಕವನ್ನು ತೊಳೆದುಕೊಳ್ಳುವುದಕ್ಕೆ ಹೋಗುವೆನೆಂದೂ ಹೇಳಿ ಹೋಗುತ್ತಾನೆ. (೬) ಮೇಳ ದವರು ಆತನ ಮಾತನ್ನು ನಂಬಿ ಆನಂದಪಟ್ಟು ಶಿವನನ್ನು ಪ್ರಾರ್ಥಿಸಿ ನಾಟ್ಯ ಮಾಡುತ್ತಾರೆ. ಅಷ್ಟರಲ್ಲಿ ದೂತನೊಬ್ಬ ಬಂದು ಅಂದಿನ ಒಂದು ದಿನದ ಮಟ್ಟಿಗೆ ಅಶ್ವತ್ಥಾಮನ ಮೇಲೆ ರುದ್ರನಿಗೆ ಕೋಪವಿರುವುದರಿಂದ ಆತನನ್ನು ನೋಡಿಕೊಳ್ಳಬೇಕೆಂದು ಕೃಷ್ಣ ಏಕಲವ್ಯನಿಗೆ ಹೇಳಿದ ವರ್ತಮಾನವನ್ನು ತಿಳಿಸಿ ದಾಗ ಮೇಳದವರು ಮತ್ತು ಭಾರ್ಗವಿ ಅಶ್ವತ್ಥಾಮನನ್ನು ಹುಡುಕಹೊರಡು ತ್ತಾರೆ. (೭) ಆದರೆ ಅಷ್ಟರಲ್ಲಿ ಅಶ್ವತ್ಥಾಮ ಪಾಂಡವರನ್ನು ಶಪಿಸಿ ಖಡ್ಗದ ಮೇಲೆ ಬಿದ್ದು ಸಾಯುತ್ತಾನೆ. ಭಾರ್ಗವಿ ಮತ್ತು ಮೇಳದವರು ಬಂದು ಅದನ್ನು ಕಂಡು ಶೋಕಿಸುತ್ತಾರೆ. ಏಕಲವ್ಯನೂ ಬಂದು ಸೇರಿ ಆತನ ಗುಣ ಪ್ರಶಂಸೆ ಮಾಡಿ ಆತನ ಪ್ರೇತ ಸಂಸ್ಕಾರಕ್ಕೆ ತೊಡಗಿದಾಗ ದ್ರೌಪದಿಯ ಮಕ್ಕಳ ಕೊಲೆಯಿಂದ ರೋಷಾವಿಷ್ಟನಾಗಿದ್ದ ಭೀಮ ಬಂದು ಆತನನ್ನು ತಡೆಯುತ್ತಾನೆ. ಭೀಮನಿಗೂ ಏಕಲವ್ಯನಿಗೂ ಯುದ್ಧ ನಡೆಯುತ್ತದೆ. (೮) ಮೇಳದವರು ಲೋಕದಲ್ಲಿ ಈ ಯುದ್ಧ ಹೇಗೆ ಪ್ರಾರಂಭವಾಯಿತೋ ಎಂದು ಶಪಿಸುತ್ತ ಅವರಿಬ್ಬರಿಗೆ ಕ್ಷಮೆಯನ್ನು ತಾಳಿ ಎಂದು ಹೇಳುತ್ತಾರೆ. (೯) ಕೃಷ್ಣನು ಬಂದು ಭೀಮನಿಗೆ ಸಮಾಧಾನ ಹೇಳುತ್ತಾನೆ--ಸತ್ತ ವೀರ ನನ್ನು ಅವಮಾನಿಸುವುದು, ಉತ್ತರ ಕ್ರಿಯೆಗಳಿಗೆ ಅಡ್ಡಿ ಮಾಡುವುದು ಧರ್ಮ ವಲ್ಲ. ಅಶ್ವತ್ಥಾಮ ಅಸಾಮಾನ್ಯ ಎಂದು ಹೊಗಳುತ್ತಾನೆ. (೧೦) ನಿನ್ನಿಷ್ಟ ಎಂದು ಹೇಳಿ ಭೀಮ ಹೊರಟು ಹೋದಾಗ ಏಕಲವ್ಯಾದಿಗಳು ಅಶ್ವತ್ಥಾಮನ ದೇಹವನ್ನು ಅಂತ್ಯ ಸಂಸ್ಕಾರಕ್ಕಾಗಿ ಸಾಗಿಸುತ್ತಾರೆ. ದೇಶಕ್ಕೆ ಹಿಂದಿರುಗಿ

ರುದ್ರನಲ್ಲಿ ಹೋರಿ ರುದ್ರನಲ್ಲಿ ಸೇರಿದ ಅಶ್ವತ್ಥಾಮನಿಗೆ ಒಂದು ದೇವಸ್ಥಾನವನ್ನು ಕಟ್ಟುವ ಹರಕೆಯೊಂದಿಗೆ ನಾಟಕ ಮುಕ್ತಾಯವಾಗುತ್ತದೆ.

ನಾಯಕನಾದವ ತನ್ನ ದುರಹಂಕಾರದ ಪರಿಣಾಮವಾಗಿ ದೈವವನ್ನು ಧಿಕ್ಕರಿಸುತ್ತಾನೆ. ಆತ ಎಸಗಬೇಕೆಂದ ಅಪಕೃತ್ಯವನ್ನು ತಪ್ಪಿಸುವುದಕ್ಕೆಂದು ದೈವ ಆತನನ್ನು ಮರುಳುಗೊಳಿಸಿ ಹೇಯವಾದ ಕೃತ್ಯದಲ್ಲಿ ತೊಡಗಿಸುತ್ತದೆ. ಬುದ್ಧಿ ತಿಳಿಯಾದಾಗ ತನ್ನ ಕೃತಿಗಾಗಿ ವ್ಯಥೆಪಟ್ಟು ಸಾವೊಂದೇ ಅದಕ್ಕೆ ಪರಿಹಾರವೆಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸತ್ತವನಿಗಾಗಿ ನಡೆಯಬೇಕಾದ ಸಂಸ್ಕಾರದ ವಿಷಯದಲ್ಲಿ ಚರ್ಚೆ ನಡೆದು ಏನಾದರೂ ಆತ ಮಹೋನ್ನತ ವ್ಯಕ್ತಿ, ಸರಿಯಾದ ಸಂಸ್ಕಾರ ನಡೆಯಬೇಕೆಂದು ನಿಶ್ಚಯವಾಗುತ್ತದೆ. ಎರಡೂ ನಾಟಕಗಳಲ್ಲಿ ಕ್ರಿಯೆ ಈ ಕ್ರಮದಲ್ಲಿ ನಡೆಯುತ್ತದೆ. ಈ ಕ್ರಿಯೆಯನ್ನು ಮೂರು ಹಂತಗಳಲ್ಲಿ ಕಾಣಬಹುದು. ಅಹಂಕಾರದ ಉರುಬಿನಲ್ಲಿ ದೈವ ವಿರೋಧ ಮತ್ತು ಅಪಕೃತ್ಯ ; ಪರಿತಾಪ ಮತ್ತು ಆತ್ಮಹತ್ಯೆ ; ಸಂಸ್ಕಾರದ ಚರ್ಚೆಯ ಮೂಲಕ ಆತನ ಗುಣಗೌರವದ ಪ್ರಶ್ನೆಯ ನಿರ್ಣಯ. ಮೊದಲಿನ ಎರಡು ಹಂತಗಳಲ್ಲಿ ದುರಂತ ಮೂಲವಾದ ಆತನ ಸ್ವಭಾವ ವಿಶೇಷ, ಅದರ ವಿವಿಧ ಬಗೆಗಳು ಮತ್ತು ಪರಿಣಾಮಗಳು ಎದ್ದು ಕಾಣುತ್ತವೆ. ಕೊನೆಯ ಹಂತದಲ್ಲಿ ಆತನ ಉನ್ನತಿ ವ್ಯಕ್ತವಾಗುತ್ತದೆ. ದೊಡ್ಡವನಾಗಿದ್ದವ ಪೂರ್ವಾರ್ಧದಲ್ಲಿ ಸಾಯುತ್ತಾನೆ. ಉತ್ತರಾರ್ಧದಲ್ಲಿ ಸಾವಿನ ಅಪಕೀರ್ತಿ ಕಳೆದು ಅದರ ಮೂಲಕವೇ ಎಂಬಂತೆ ಇನ್ನೂ ದೊಡ್ಡವನಾಗಿ ಕಾಣುತ್ತಾನೆ. ಹೀಗೆ ನಾಯಕನ ಗುಣ ಪ್ರಕಾಶನವನ್ನು ಸಾಧಿಸುವುದು ನಾಟಕದ ಕ್ರಿಯಾ ವಿಧಾನವಾಗುತ್ತದೆ.

ಅಹಂಕಾರದ ಮದ (ಹ್ಯೂಬ್ರಿಸ್) ದೇವತೆಗಳ ಕೋಪವನ್ನು ಕೆರಳಿಸುತ್ತದೆ, ಅದೇ ನಾಯಕನ ಪತನಕ್ಕೆ ಕಾರಣವಾಗುತ್ತದೆ ಎನ್ನುವುದು ಗ್ರೀಕ್ ದುರಂತ ನಾಟಕಗಳಲ್ಲಿ ಒಂದು ಪ್ರಧಾನ ವಿಚಾರ. 'ಅಶ್ವತ್ಥಾಮನ್' ನಾಟಕದಲ್ಲಿ ಅದೇ ವಿಚಾರ ಎದ್ದು ಕಾಣುತ್ತದೆ. ಆತನ ಅಹಂಕಾರ ಮದವೇ ಆತನ ದುರಂತದ ಮೂಲ. ಆತನ ಕಥೆ ಎಂದರೆ ಆತನ ಅಹಂಕಾರದ ಕಥೆ ಎನ್ನ

ಬೇಕಾದ ಮಟ್ಟಿಗೆ ಅದು ಆತನ ಸ್ವಭಾವ ಲಕ್ಷಣವಾಗಿದೆ. ಅದರ ಮೂಲಕ
ಆತನ ಹಿರಿಮೆಯೂ ಪ್ರಕಟವಾಗುತ್ತದೆ. ನಾಟಕದ ನಾಯಕನಾದ ಆತನ ಹಿರಿಮೆ
ಕಿರಿಮೆಗಳೆರಡಕ್ಕೂ ಅದೇ ಮೂಲವಾಗಿರುವುದರಿಂದ ಅದು ಪ್ರಕಟವಾಗಿ
ಪರಿಣಾಮವನ್ನು ಸಾಧಿಸುವ ರೀತಿಯನ್ನು ಗುರುತಿಸುವುದೇ ನಾಟಕದ
ಅರ್ಥವಂತಿಕೆಯನ್ನು ತಿಳಿದುಕೊಳ್ಳುವ ಮಾರ್ಗವಾಗುತ್ತದೆ.

ಪಾಂಡವರ ವಿನಾಶಕ್ಕಾಗಿ ಬೇಡಿದ ವರವನ್ನು ರುದ್ರ ನಿರಾಕರಿಸಿದಾಗ
ಅಶ್ವತ್ಥಾಮ ಆತನಿಗೆ ಹೇಳುವ "ನೋಡುತ್ತಿರು, ವೀರ್ಯಂ ಮಾನುಷಂ" ಎಂಬ
ಮಾತು ದೈವವನ್ನು ಧಿಕ್ಕರಿಸುವ ಮಟ್ಟಕ್ಕೇರಿದ ಅಹಂಕಾರ. ಆ ಮಾತೇ
ರುದ್ರನ ಆಗ್ರಹಕ್ಕೆ ಕಾರಣವಾಗುತ್ತದೆ. ಅಹಂಕಾರ ಅಶ್ವತ್ಥಾಮನಿಗೆ ಹುಟ್ಟು
ಗುಣ. ಶಸ್ತ್ರವಿದ್ಯೆಯನ್ನು ಹೇಳಿಕೊಟ್ಟ ತಂದೆ ದೇವರನ್ನು ನಮಿಸಿ ಪೌರುಷವನ್ನು
ಮೆರೆ ಎಂದು ಹರಸಿದಾಗ ದೇವತೆಗಳ ನೆರವಿದ್ದರೆ ಹೇಡಿಯೂ ಗೆಲ್ಲುತ್ತಾನೆ; ಅವರ
ಸಹಾಯವಿಲ್ಲದೆ ಜಯಲಕ್ಷ್ಮಿಯ ಮುಂದಲೆಯನ್ನು ಸೆಳೆಯುತ್ತೇನೆ ಎಂದಿದ್ದ.
ಇನ್ನೊಂದು ಸಲ ಯುದ್ಧದಲ್ಲಿ ರುದ್ರ ಸಹಾಯಕ್ಕೆ ಬಂದಾಗ ಎದುರಾಳಿಗಳ
ಕಡೆಗೆ ಹೋಗು ಎಂದು ಹೇಳಿದ್ದ. ಇಂಥ ಅಹಂಕಾರದ ಜೊತೆಯಲ್ಲಿ ದುರ್ಯೋ
ಧನನ ಬಗೆಯಲ್ಲಿ ಅಚಲವಾದ ಸ್ವಾಮಿನಿಷ್ಠೆಯೊಂದು ಸೇರಿದೆ. ಸ್ವಾಮಿನಿಷ್ಠೆ
ಒಳ್ಳೆಯ ಗುಣವಾದರೂ ಅಹಂಕಾರದ ಮೂಲಕ ಅದು ಅಪಕೃತ್ಯಕ್ಕೆಳೆಯುತ್ತದೆ.

ಅಪಕೃತ್ಯವನ್ನು ಎಸಗಿದ ನಂತರ ಅದೇ ಅಹಂಕಾರ ಆತನನ್ನು ಆತ್ಮ
ಹತ್ಯೆಯ ಕಡೆಗೆ ಸೆಳೆಯುತ್ತದೆ. ತಾನು ಬದುಕಿರುವುದಕ್ಕೆ ಅರ್ಹನಲ್ಲ ಎಂದು
ಆತ ಹೇಳುವುದು ಪಶ್ಚಾತ್ತಾಪಕ್ಕಾಗಿ ಅಲ್ಲ. ಲೋಕ ತನ್ನನ್ನು ಹಳಿಯುತ್ತದೆ
ಎನ್ನುವುದಕ್ಕಾಗಿ. ಅಹಂಕಾರಿಗೆ ತನ್ನ ಹೊರತು ಬೇರೆ ಯೋಚನೆ ಹೊಳೆಯು
ವುದೇ ಇಲ್ಲ. ಸಾಯುವ ನಿರ್ಧಾರವನ್ನು ಕೈಕೊಂಡಾಗಲೂ ತನ್ನನ್ನು ಕೊಂದು
ಕೊಳ್ಳುವ ಹೆಮ್ಮೆಯೂ ತನ್ನದೇ ಆಗಿರಬೇಕು ಎನ್ನುವ ಆಳದ್ದು ಆತನ
ಆತ್ಮಾಭಿಮಾನ. ಸತ್ತಮೇಲೆ ಕೂಡ ತನ್ನ ದೇಹ ವೈರಿಯ ಕಣ್ಣಿಗೆ ಮೊದಲು
ಬೀಳಬಾರದು ಎಂದು ಕೊನೆಯಲ್ಲಿ ಪ್ರಾರ್ಥಿಸುತ್ತಾನೆ. ಆತನ ಅಹಂಕಾರ
ಇಂತಹ ಆತ್ಮನಿಷ್ಠೆಯ ಮಟ್ಟದಲ್ಲಿ ಮಾತ್ರ ಉಳಿಯದೆ ದೈವತವನ್ನು ಕುರಿತ

ಔದ್ಧತ್ಯವಾಗುವವರೆಗೆ ಬೆಳೆಯುತ್ತದೆ. ರುದ್ರನನ್ನು ಮೊದಲಲ್ಲಿಯೇ ಪ್ರತಿಭಟಿಸಿದ್ದಾನೆ. ಪರಿತಾಪದ ಸಂದರ್ಭದಲ್ಲಿಯೂ "ಆ ಕ್ಷುದ್ರ ದೇವತೆಗಳೇನ್ ಬಲ್ಲುವೆನ್ನನ್" ಎನ್ನುತ್ತಾನೆ. ಇಂಥ ಮನಸ್ಸು ತನ್ನ ಅವಮಾನಕ್ಕಾಗಿ ದುಃಖ ಪಡಬಹುದೇ ಹೊರತು ತನ್ನ ಅಪಕೃತ್ಯಕ್ಕಾಗಿ ಪಶ್ಚಾತ್ತಾಪ ಪಡುವುದಿಲ್ಲ. ತಾನು ಮಾಡಿದ್ದು ತಪ್ಪು ಎಂದು ಒಪ್ಪಿಕೊಳ್ಳುವುದಿಲ್ಲ. ಒಂದು ಸಲ ತನ್ನನ್ನು ಪಾಪಿ ಎಂದು ಹಳಿದುಕೊಂಡರೂ ಅದು ಆತ್ಮಾವಹೇಳನವೇ ಹೊರತು ಪಾಪ ಪ್ರಜ್ಞೆಯಲ್ಲ. ತಪ್ಪು ತನ್ನದಲ್ಲ, ತನ್ನನ್ನು ದೈವ ಮೋಸ ಮಾಡಿತು ಎನ್ನುವುದೇ ಕೊನೆಯವರೆಗೂ ಆತನ ನಿಲುವು. ತನ್ನ ಮಗನನ್ನು ಹರಸುವಾಗ ತನ್ನ ಅದೃಷ್ಟವನ್ನೇ ದೂಷಿಸುತ್ತಾನೆ.

ನಾಟಕದ ಉದ್ದಕ್ಕೂ ದೈವ, ವಿಧಿ, ದೇವತೆಗಳ ಪ್ರಾಬಲ್ಯಗಳ ಮಾತು ಬರುತ್ತದೆ. ಒಂದಿಲ್ಲೊಂದು ಸಂದರ್ಭದಲ್ಲಿ ಎಲ್ಲ ಪಾತ್ರಗಳೂ ಅದೃಷ್ಟ ದೈವದ ಕೈವಾಡವನ್ನು ಪ್ರಸ್ತಾಪಿಸುತ್ತವೆ. ರುದ್ರ, ಕೃಷ್ಣ, ಭಾರ್ಗವಿ, ಏಕಲವ್ಯ, ಮೇಳನಾಯಕ, ಕೊನೆಯಲ್ಲಿ ಭೀಮ ಕೂಡ ದೈವದ ಆಧಿಪತ್ಯವನ್ನು ಕುರಿತು ಆಡುತ್ತಾರೆ. ಇದು ಗ್ರೀಕ್ ನಾಟಕದ ಸಂಪ್ರದಾಯವಾದರೂ ಭಾರತೀಯರಿಗೆ ಅಪರಿಚಿತವಲ್ಲ. ಅನಿರೀಕ್ಷಿತವಾದದ್ದು ಅಥವಾ ಆಗಬಾರದೆಂದದ್ದು ಏನಾದರೊಂದು ನಡೆದಾಗ ವಿಧಿಯ ಅಥವಾ ದೈವದ ಮಾತು ಬಂದೇ ಬರುತ್ತದೆ. ವಿಧಿಯೊ, ದೈವವೊ, ಅದೃಷ್ಟವೊ, ಯಾವುದೇ ಆದರೂ ಅದು ಮನುಷ್ಯನ ಮುಖಾಂತರವೇ ಕ್ರಿಯಾಮುಖವಾಗಬೇಕು. ಆ ದೃಷ್ಟಿಯಿಂದ ಅಶ್ವತ್ಥಾಮನ ಅಹಂಕಾರ ಆತನ ದೈವ ವ್ಯವಹರಿಸುವ ಒಂದು ಸಾಧನವಾಯಿತು ಎನ್ನಬೇಕಾಗುತ್ತದೆ. ಅದು ಹೇಗಿದ್ದರೂ ಇಂಥ ಮಾತು ನಡೆದ ದುರಂತ ನಡೆಯಬಾರದಾಗಿತ್ತು ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತವೆ. ಅಶ್ವತ್ಥಾಮನ ಬಗೆಯಲ್ಲಿಯ ಅಂಥ ಮಾತುಗಳು ಆತನಲ್ಲಿಯ ಹಿರಿಯ ಸತ್ವವನ್ನು ಸೂಚಿಸುತ್ತವೆ. ನೇರವಾಗಿ ರುದ್ರನನ್ನು ಪ್ರತಿಭಟಿಸಬಲ್ಲವನ ಸತ್ವ ಸಾಮಾನ್ಯವೆನ್ನಲಾಗುವುದಿಲ್ಲ. ಅಂಥ ಸತ್ವದ ಮೂಲಕವೇ ತನ್ನ ಮೇಲೆ ತಾನೇ ತಂದುಕೊಂಡ ದುರಂತವನ್ನು ಧೀರರಲ್ಲಿ ಧೀರನಾಗಿ ಎದುರಿಸಬಲ್ಲ ಸಾಮರ್ಥ್ಯದ ಮೂಲವಾಗುತ್ತದೆ. ಅವಮಾನಕ್ಕಿಂತ ಅವಸಾನ ಲೇಸೆಂದು

ಬಗೆಯುವುದು ಅಂಥ ಸತ್ವದ ಮೂಲಕವೇ. ಆದರೆ ನಾಟಕದ ಪ್ರಾರಂಭ ದಲ್ಲಿಯೇ ನಾಯಕನಿಂದ ಅಪಕೃತ್ಯ ನಡೆದುಹೋಗಿರುವುದರಿಂದ ಆತನ ಹಿರಿಮೆಯ ಪ್ರಕಾಶನಕ್ಕೆ ನಾಟಕದ ಒಳಗಡೆಯಲ್ಲಿ ನೇರವಾದ ಅವಕಾಶವಿಲ್ಲ. ಇನ್ನೊಬ್ಬರ ಬಾಯಿಂದಲೇ ಆತನ ಹಿರಿಮೆಯನ್ನು ಕೇಳಬೇಕಾಗುತ್ತದೆ. ಅದರ ಬಗೆಯಲ್ಲಿ ನಾಟಕದಲ್ಲಿಯ ಯಾರಿಗೂ ಎರಡು ಅಭಿಪ್ರಾಯಗಳಿಲ್ಲ. ರುದ್ರ, ಕೃಷ್ಣ, ಏಕಲವ್ಯ, ಎಲ್ಲರೂ ಆತನ ಗುಣಗಾನವನ್ನು ಮಾಡುತ್ತಾರೆ. ಇಂಥ ಶೂರ, ಇಂಥ ಜ್ಞಾನಿ ಯಾರಿದ್ದರು ಎಂದು ರುದ್ರ ಕೇಳಿದ್ದಕ್ಕೆ ಕೃಷ್ಣ ನಾನು ಕಾಣೆ ಎಂದು ಹೇಳುತ್ತಾನೆ. ತನಗೆ ಬದ್ಧದ್ವೇಷಿಯಾಗಿದ್ದರೂ ಆತನನ್ನು ಕಲಿಗಳಲ್ಲಿ ಕಲಿ ಎಂದು ಮುಕ್ತಕಂಠವಾಗಿ ಹೊಗಳುತ್ತಾನೆ.

ಎರಡು ಸನ್ನಿವೇಶಗಳಲ್ಲಿ ನಾಟಕದಲ್ಲಿಯೇ ಅಶ್ವತ್ಥಾಮನಲ್ಲಿಯ ಹಿರಿಯ ಸತ್ವವನ್ನು ಕಾಣುತ್ತೇವೆ. ಸ್ವಪತ್ನಿಯನ್ನು ನಿರ್ಧರಿಸಿದ ಮೇಲೆ ಮಗುವನ್ನು ಕರೆಸಿ ಎತ್ತಿಕೊಂಡು ಹರಸುವಾಗ: ಮತ್ತು ತಾನು ಕೊನೆಯಲ್ಲಿ ಖಡ್ಗದ ಮೇಲೆ ಬೀಳುವ ಮುನ್ನ. ಈ ಎರಡೂ ಸಂದರ್ಭಗಳು ಹೃದಯಸ್ಪರ್ಶಿಯಾಗಿದ್ದಷ್ಟೂ ಆತನ ಅಂತರಂಗದ ಉನ್ನತಿಯನ್ನು ಎತ್ತಿ ತೋರಿಸುವಂಥವಾಗಿವೆ. ಮೊದಲ ಸಂದರ್ಭದಲ್ಲಿ ಕಾಣುವ ಆತನ ಹೃದಯದಲ್ಲಿಯ ವಾತ್ಸಲ್ಯ ಇಂಥವ ಹೆಂಗಸರ, ಮಕ್ಕಳ, ಕಗ್ಗೊಲೆಯನ್ನು ಮಾಯೆಯ ಮುಸುಕಿನಲ್ಲಲ್ಲದೆ ಮಾಡಲಾರ ಎನ್ನುವಂತೆ ಮಾಡುತ್ತದೆ. ತನ್ನ ಬದುಕಿನ ಕೊನೆಯ ಗಳಿಗೆಯಲ್ಲಂತೂ ಆತನಲ್ಲಡಗಿದ ಉನ್ನತಿ ಉಕ್ಕಿಬರುತ್ತದೆ. ತನ್ನ ಕೊನೆಯ ನುಡಿಯಾಗಿ ಈ ಹಗಲ ಬೆಳಕು ತನಗೆ ಇನ್ನೆಲ್ಲಿ ಎಂದು ಎಳೆ ಬಿಸಿಲನ್ನು, ಸೂರ್ಯನನ್ನು ಕುರಿತು ಹೇಳುವಲ್ಲಿ, ಅಚ್ಚುಮೆಚ್ಚಿನ ತಾಯ್ನಾಡಾದ ಕನ್ನಡವನ್ನು ನೆನೆದುಕೊಳ್ಳುವುದರಲ್ಲಿ ಆತನಲ್ಲಿಯ ಭಾವೋನ್ನತಿ ಕಾವ್ಯವಾಗಿ ಹರಿಯುತ್ತದೆ. ಅಂಥದರ ಮೂಲಕ ಅಶ್ವತ್ಥಾಮ ಉದಾತ್ತ ವ್ಯಕ್ತಿತ್ವದ ದುರಂತ ನಾಯಕನಾಗಿ ನಿಲ್ಲುತ್ತಾನೆ.

ಗ್ರೀಕ್ ವೀರ ಪರಂಪರೆಯಲ್ಲಿ ಆಗಲೆ ಹಿರಿಯ ಸ್ಥಾನದಲ್ಲಿದ್ದ ಏಜಾಕ್ಸನ ಮೇಲ್ಮೆಯನ್ನು ಪುನಃ ಸ್ಥಾಪಿಸುವುದಕ್ಕೆ ನಾಟಕದ ಮುಂದಿನ ಭಾಗ ಅಗತ್ಯವಾಗಿದೆ. ಅಲ್ಲದೆ ಮಡಿದ ವೀರನಿಗೆ ಯೋಗ್ಯ ಸಮಾಧಿಯ ಪ್ರಶ್ನೆಗೆ ಗ್ರೀಕರ

ದೃಷ್ಟಿಯಲ್ಲಿ ವಿಶೇಷ ಮಹತ್ವವಿದ್ದಿತು. ಪ್ರಸ್ತುತ ನಾಟಕದಲ್ಲಿಯ ವಿಸ್ತರಣೆ ಯನ್ನು ಶ್ರೀಕಂಠಯ್ಯನವರು ಅಶ್ವತ್ಥಾಮನ ಹಿರಿಮೆಯನ್ನು ಎತ್ತಿ ತೋರಿ ಸುವುದಕ್ಕಲ್ಲದೆ ಒಂದು ಉದಾತ್ತವಾದ ಜೀವನ ದೃಷ್ಟಿಯನ್ನು ಪ್ರತಿಪಾದಿಸು ವುದಕ್ಕೆ ಬಳಸಿದ್ದಾರೆ. ಅಂತ್ಯ ಸಂಸ್ಕಾರದ ವಿಚಾರದಲ್ಲಿ ಭೀಮ ಏಕಲವ್ಯ ಯುದ್ಧಕ್ಕೆ ತೊಡಗಿದಾಗ ಯುದ್ಧ ಲೋಕದಿಂದ ತೊಲಗುವುದಿಲ್ಲವೆ, ಶಾಂತಿ ನೆಲಸಲಾರದೆ, ಎಂದು ಗೋಳಿಟ್ಟಾಗ ಕೃಷ್ಣ ಭೀಮನನ್ನು ತಡೆಯುತ್ತಾನೆ. ಅಶ್ವತ್ಥಾಮನ ದೇಹವನ್ನು ಹಾಗೆ ಬಿಟ್ಟುಕೊಟ್ಟರೆ ತಮಗೆ ಬಂದ ಜಯ ವೆಂಥದು ಎಂದು ಭೀಮ ಕೇಳಿದ್ದಕ್ಕೆ ಕೃಷ್ಣ ಮಡಿದ ವೀರನನ್ನು ಅವಮಾನ ಮಾಡುವುದು ಧರ್ಮವಲ್ಲ ಎಂದು, "ಕೆಳೆಯಂಗೆ ಸೋಲ್ವುದೆ ಜಯಂ, ಕ್ಷಮೆಯೆ ತಾನ್ ಜಯಂ" ಎಂದು ಹೇಳಿ ಲೋಕದಲ್ಲಿ ಯುದ್ಧವನ್ನು ಕೊನೆ ಗಾಣಿಸುವ ದಾರಿಯನ್ನು ತೋರಿಸುತ್ತಾನೆ. ಅಶ್ವತ್ಥಾಮ ಸಾಮಾನ್ಯನಲ್ಲ, ವೀರಾಧಿವೀರ, ಎಂದು ಬಾಯಿತುಂಬ ಆತನನ್ನು ಹೊಗಳುತ್ತಾನೆ.

ನಾಟಕದಲ್ಲಿ 'ಚಿರಂಜೀವಿ' ಯಾಗಿದ್ದ ಅಶ್ವತ್ಥಾಮ ಆತ್ಮಹತ್ಯೆ ಮಾಡಿ ಕೊಂಡಂತೆ ಚಿತ್ರಿಸಿದ್ದಾರೆ: ಕೃಷ್ಣನನ್ನು ಒಬ್ಬ ಸಾಮಾನ್ಯ ಮನುಷ್ಯನನ್ನಾಗಿ ಸಿದ್ದಾರೆ ಎಂಬ ವಿಚಾರವಲ್ಲಿ ಬೇಕಾದಷ್ಟು ಚರ್ಚೆ ನಡೆದಿದೆ. ಆತ ಚಿರಂಜೀವಿ ಎನ್ನುವುದಕ್ಕೆ ಯಾರೋ ಬರೆದ ಯಾವುದೋ ಒಂದು ಶ್ಲೋಕದ ಹೊರತು ಬೇರೆ ಆಧಾರವಿಲ್ಲ. ಆತ ಚಿರಂಜೀವಿಯಾಗಿದ್ದರೆ ಅತ ಹತನಾದ ಎಂಬ ದನಿ ಯನ್ನು ಕೇಳಿ ದ್ರೋಣಾಚಾರ್ಯರು ಶಸ್ತ್ರ ಸಂನ್ಯಾಸ ಮಾಡುತ್ತಿದ್ದಿಲ್ಲ. ಅಲ್ಲದೆ ಇಲ್ಲಿಯ ಅಶ್ವತ್ಥಾಮ ಮಹಾಭಾರತದ ಅಶ್ವತ್ಥಾಮನಿಂದ ಬೇರೆಯಾಗಿದ್ದಾನೆ. ಈತ ಪಾಂಚಾಲರನ್ನು ಮತ್ತು ಉಪ ಪಾಂಡವರನ್ನು ಕೊಲ್ಲುವುದಿಲ್ಲ—ರುದ್ರನ ಮಾಯೆಯಿಂದಾಗಿ ಕೊಲ್ಲಲಾಗುವುದಿಲ್ಲ. ಆದ್ದರಿಂದ ಆತ ಚಿರಂಜೀವಿಯೆ ಎನ್ನುವ ಪ್ರಶ್ನೆಗಿಂತ ಆತನ ಸಾವು ಸಮರ್ಪಕವೆ, ಸಮರ್ಥನೀಯವೇ, ಎಂಬ ಪ್ರಶ್ನೆ ಹೆಚ್ಚು ಮಹತ್ವದ್ದಾಗುತ್ತದೆ. ಅವಮಾನಕ್ಕಿಂತ ಅವಸಾನವೇ ಒಳ್ಳೆಯ ದೆನ್ನುವ ಸ್ವಭಾವ ಆತನದಾದ್ದರಿಂದ ಅವನ ಸನ್ನಿವೇಶದಲ್ಲಿ ಸಾವೊಂದೇ ಪರಿಹಾರವಾಗುತ್ತದೆ.

ಕೃಷ್ಣನನ್ನು ಒಬ್ಬ ಮನುಷ್ಯನನ್ನಾಗಿಸಿದ್ದಾರೆ ಎಂದು ಆಕ್ಷೇಪಿಸುವವರು ಆ ವ್ಯಕ್ತಿತ್ವದ ಉನ್ನತಿಯನ್ನು, ನಾಟಕದಲ್ಲಿ ಅದು ಸಾಧಿಸುವ ಕಾರ್ಯವನ್ನು ಮರೆಯುತ್ತಾರೆ. ಯುದ್ಧವನ್ನು ತಡೆದು ಶಾಂತಿ ಸೌಹಾರ್ದಗಳ ಪಾಠವನ್ನು ಹೇಳುವ ಧರ್ಮದೃಷ್ಟಿ, ತನಗೆ ಕಡು ವೈರಿಯಾಗಿದ್ದರೂ ಆ ಒಂದು ದಿನ ಅಶ್ವತ್ಥಾಮನನ್ನು ನೋಡಿಕೊಂಡು ಉಳಿಸಬೇಕು ಎಂದು ಏಕಲವ್ಯನಿಗೆ ತಿಳಿಸುವ ಔದಾರ್ಯ, ಆತನೊಬ್ಬ ಮಹಾವೀರ, ಪೂಜ್ಯ ಎಂದು ಹೊಗಳುವ ಹೃದಯ ವೈಶಾಲ್ಯ ದೇವರಂಥ ಮನುಷ್ಯನಲ್ಲಿ ಮಾತ್ರ ಸಾಧ್ಯ. ದೇವರು ಮನುಷ್ಯನಾಗಿ ಅವತರಿಸಿದ ಎಂದು ಹೇಳುವುದಕ್ಕಿಂತ ಆತ ದೊಡ್ಡವನಾಗಿ ದೇವರಾದ ಎಂದು ಹೇಳುವುದು ನಂಬಬಹುದಾದ ವಿಚಾರವಾಗುತ್ತದೆ. ಅಂಥವನ ನಡತೆ ದೇವತ್ವದ ಕಲ್ಪನೆಗೊಂದು ನಿದರ್ಶನವಾಗುತ್ತದೆ.

ಒಂದು ಕಡೆಯಿಂದ ದೇವ ಮಾನವ ಸಂಬಂಧ, ಇನ್ನೊಂದು ಕಡೆಯಿಂದ ಧರ್ಮದೃಷ್ಟಿಯ ಪ್ರಭಾವ ಮನುಷ್ಯ ವ್ಯಾಪಾರದ ಇತಿಮಿತಿಗಳನ್ನು ನಿರ್ಧರಿಸುತ್ತವೆ. ಮನುಷ್ಯ ಸ್ವತಂತ್ರನಾಗಿದ್ದಷ್ಟು ಅಸ್ವತಂತ್ರನೂ ಆಗಿದ್ದಾನೆ. ಎಷ್ಟೇ ಸ್ವತಂತ್ರನೆಂದರೂ ತನ್ನನ್ನು ಮೀರಿದ ಶಕ್ತಿಗಳ ಸನ್ನಾಹದ ಮಧ್ಯದಲ್ಲಿಯೇ ಆತ ವ್ಯವಹರಿಸಬೇಕಾಗುತ್ತದೆ. ತಿಳಿಯಲಾಗದ ಈ ಪ್ರಭಾವಾಂಶಗಳ ಸಂಕೀರ್ಣವನ್ನೇ ನಾವು ಅದೃಷ್ಟ, ದೈವ ಎನ್ನುವುದು. ಇವಲ್ಲದೆ ಸಮುದಾಯ ಹಿತದ ದೃಷ್ಟಿಯಿಂದ ಧರ್ಮ, ನೀತಿ, ಎಂಬ ಹೆಸರಿನಲ್ಲಿ ಕೆಲವೊಂದು ವಿಧಿ ನಿಯಮಗಳನ್ನು ಮನುಷ್ಯ ಏರ್ಪಡಿಸಿಕೊಂಡಿರುತ್ತಾನೆ. ಈ ಎರಡೂ ಮನುಷ್ಯನ ಕ್ರಿಯಾಸ್ವಾತಂತ್ರ್ಯವನ್ನು ನಿಯಂತ್ರಿಸುತ್ತವೆ. ತಿಳಿಯಲಾಗದ ಅದೃಷ್ಟದ ಬಗೆಯಲ್ಲಿ ವಿನೀತ ಭಾವವನ್ನು, ತಿಳಿಯಬಹುದಾದ ಧರ್ಮನೀತಿಗಳ ಬಗೆಯಲ್ಲಿ ವಿವೇಕದ ತಿಳಿವನ್ನು ಬೆಳೆಯಿಸಿಕೊಳ್ಳದಾದಾಗ ಅಥವಾ ಅಹಂಕಾರ ಪ್ರಮತ್ತನಾಗಿ ಧಿಕ್ಕರಿಸಿದಾಗ ಬದುಕು ತೊಡಕಿನಲ್ಲಿ ಸಿಲುಕುತ್ತದೆ. ಈ ಎರಡೂ ಹೊರಗಿನ ಶಕ್ತಿಗಳಾಗಿರದೆ ಒಳಗಿನಿಂದಲೇ ಮನುಷ್ಯನ ಸ್ವಭಾವವನ್ನು, ಆಕಾಂಕ್ಷೆಗಳನ್ನು ನಿರ್ಧರಿಸುವುದರಿಂದ ಆತನ ನಡತೆಯ ಹಿಂದಿನ ಪ್ರೇರಣೆಯೇ ಆತನ ಸುಖ ದುಃಖಗಳಿಗೆ ಕಾರಣವಾಗುತ್ತದೆ. ಸಾಮಾನ್ಯನ ಬದುಕಿನಲ್ಲಿ ಇವು ಸಾಮಾನ್ಯ ಪ್ರಮಾಣದಲ್ಲಿದ್ದರೆ ಅಶ್ವತ್ಥಾಮನಂಥ ಅಸಾಮಾನ್ಯ

ನಲ್ಲಿ ಕಣ್ಣೊತ್ತುವಂತೆ ಗೋಚರಿಸುತ್ತವೆ. ನಾಟಕದ ವಿವಿಧ ಹಂತಗಳಲ್ಲಿ ಇಂಥ ಒಂದು ಜೀವನ ದರ್ಶನ ಧ್ವನಿತವಾಗಿ ಕೃತಿಯನ್ನು ಒಂದು ಶ್ರೇಷ್ಠ ಕಲಾ ಕೃತಿಯನ್ನಾಗಿಸುತ್ತದೆ.

ಪೂರ್ತಿಯಾಗಿ ಪದ್ಯ ರೂಪದಲ್ಲಿದ್ದ ಈ ನಾಟಕ ಬಳಸುವ ಛಂದೋ ರೂಪಗಳ ವೈವಿಧ್ಯ ವಿಲಾಸಗಳನ್ನು, ಭಾಷೆಯ ಸೊಗಸು ಸಾಮರ್ಥ್ಯಗಳನ್ನು, ನೆನೆಯದೆ ಕೃತಿಯ ಹಿರಿಮೆಯನ್ನು ತಿಳಿಯಲಾಗುವುದಿಲ್ಲ. ಈ ಎರಡೂ ಮೊದಲಿನಿಂದ ಕೊನೆಯವರೆಗೆ ನಾಟಕದ ಆವರಣವನ್ನು, ಘಟನೆಗಳನ್ನು ಒಂದು ಎತ್ತರದ ಮಟ್ಟದಲ್ಲಿ ವ್ಯಕ್ತಪಡಿಸುತ್ತವೆ. ಸಂಭಾಷಣೆಗೆ, ವಿವರಣೆಗೆ, ಸ್ವಗತಭಾಷಣಕ್ಕೆ, ಆಯಾಯ ಸನ್ನಿವೇಶದಲ್ಲಿಯ ಭಾವಕ್ಕೆ ತಕ್ಕಂತೆ ಭಾಷೆ ನುಡಿಯುತ್ತದೆ: ಭಾವಕ್ಕೆ ಪೋಷಕವಾಗಿ ಛಂದಸ್ಸು ನಡೆಯುತ್ತದೆ. ಸಂಸ್ಕೃತದ ಆಡಂಬರವಿಲ್ಲದ ಶುದ್ಧ ಹಳೆಯ ಕನ್ನಡ ಸಾಧಿಸುವ ಲಯದ ನಡಿಗೆಯನ್ನು, ಓಜಸ್ಸನ್ನು, ಶಕ್ತಿಯನ್ನು ನಾಟಕವನ್ನು ಗಟ್ಟಿಯಾಗಿ ಓದಿಯೇ ಅನುಭವಿಸ ಬೇಕು. 'ಅಶ್ವತ್ಥಾಮನ್' ಆಚಾರ್ಯ ಶ್ರೀಯವರ ಆಚಾರ್ಯ ಕೃತಿ.

(೧೧)

ಗ್ರೀಕ್ ರುದ್ರನಾಟಕ ಪರಂಪರೆಯ ನಿರ್ಮಾತೃವೆನ್ನಲಾದ ಈಸ್ಕಿಲಸ್‌ನ "ಪರ್ಸಿ" ನಾಟಕದ ಅನುವಾದ "ಪಾರಸಿಕರು". ಶ್ರೀಕಂಠಯ್ಯನವರ ಮೂರನೆಯ ನಾಟಕವಾದ ಇದು ೧೯೩೫ರಲ್ಲಿ ಪ್ರಕಟವಾಯಿತು. ಮೇಳಗೀತದಲ್ಲಿ ಉದಯಿಸಿದ ನಾಟಕಕ್ಕೆ ದೃಶ್ಯ ಭಾಗವನ್ನು ಮತ್ತು ಸಂಭಾಷಣೆಯನ್ನು ಅಳವಡಿಸಿದ ಈಸ್ಕಿಲಸನ ನಾಟಕಗಳಲ್ಲಿ ಕಥಾಭಾಗಕ್ಕಿಂತ ಜೀವನ ಧರ್ಮದ ವಿಚಾರಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರುತ್ತದೆ. ಅಲ್ಲದೆ ಈಸ್ಕಿಲಸ್ ಶ್ರೇಷ್ಠ ಕವಿ. ಆದ್ದರಿಂದ ನಾಟಕಕ್ರಿಯೆಯ ದೃಷ್ಟಿಯಿಂದ ಆತನ ನಾಟಕಗಳು ಜಡಕಲಾಗಿ ಕಂಡರೂ ಅವುಗಳಲ್ಲಿಯ ಕಾವ್ಯ ಸಾಮರ್ಥ್ಯ ಮತ್ತು ಚಿತ್ರಿಸಿದ ಸನ್ನಿವೇಶ ದಲ್ಲಿಯೇ ಒಡಮೂಡುವ ಧರ್ಮತತ್ವ ಆತನ ನಾಟಕಗಳಿಗೆ ಒಂದು ವಿಶಿಷ್ಟ ವಾದ ಶಕ್ತಿಯನ್ನು ತಂದುಕೊಡುತ್ತವೆ. "ಪಾರಸಿಕರು" ಅಂಥ ಒಂದು

ನಾಟಕ. ಅಷ್ಟಕ್ಕಾಗಿಯೇ ಶ್ರೀಕಂಠಯ್ಯನವರು ಅದನ್ನು ಅನುವಾದಕ್ಕೆಂದು ಆಯ್ದುಕೊಂಡರೆಂದು ಕಾಣುತ್ತದೆ.

ಕ್ರಿ.ಪೂ. ೪೮೦ರಲ್ಲಿ ಪಾರಸಿಕರು ತಮ್ಮ ದೊರೆ ಕ್ಷಯಾರ್ಷನ ನೇತೃತ್ವದಲ್ಲಿ ಗ್ರೀಕರೊಡನೆ ಮಾಡಿದ ಯುದ್ಧದ ಕಥೆಯನ್ನು ನಾಟಕ ಹೇಳುತ್ತದೆ. ಗ್ರೀಕರು ಪಾರಸಿಕರ ಹಡಗುಪಡೆಯನ್ನು ಮತ್ತು ಸೈನ್ಯವನ್ನು ಪೂರ್ತಿಯಾಗಿ ಧ್ವಂಸ ಮಾಡಿ ಚಕ್ರವರ್ತಿ ಕ್ಷಯಾರ್ಷ ಹರಕು ಬಟ್ಟೆ ಹಾಕಿಕೊಂಡು ಒಬ್ಬ ಮೈಗಾವಲಿನವನೂ ಇಲ್ಲದೆ ಹಿಂದಿರುಗುವಂತೆ ಮಾಡುತ್ತಾರೆ. ಸಾಲಾಮಿಸ್‌ನಲ್ಲಿ ನಡೆದ ಈ ಯುದ್ಧದಲ್ಲಿ ಈಸ್ಕಿಲಸ್ ಭಾಗವಹಿಸಿದ್ದರೂ ನಾಟಕವನ್ನು ಗ್ರೀಕರ ಜಯ ಗೀತೆಯನ್ನಾಗಿಸದೆ ಪಾರಸಿಕರ ಶೋಕಗೀತೆಯನ್ನಾಗಿಸುತ್ತಾನೆ. ತಮ್ಮ ಗೆಲುವಿಗಿಂತ ಪಾರಸಿಕರ ಸೋಲು ಆತನಿಗೆ ಅರ್ಥಪೂರ್ಣವಾಗಿ ಕಂಡಿತು. ಅವರು ಯುದ್ಧದಲ್ಲಿ ಸೋತದ್ದು ತಮ್ಮ ದೊರೆಯ ಅಹಂಕಾರಮದದ ಫಲವಾಗಿ. ಕ್ಷಯಾರ್ಷನ ತಂದೆ ಹಿಂದೊಮ್ಮೆ ಮಾರಾಥಾನ್‌ನಲ್ಲಿ ಗ್ರೀಕರ ಮೇಲೆ ಬಿದ್ದು ಅವರ ಕಹಿಯನ್ನು ಕಂಡಿದ್ದ. ಆದರ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಎಂದೋ ತನ್ನ ಚಕ್ರಾಧಿಪತ್ಯದ ಮದದಿಂದ ಕೊಬ್ಬಿಯೋ, ತನಗೆ ಅಧೀನರಾಗಿದ್ದ ಹತ್ತಾರು ಮಾಂಡಲಿಕರ ಸಹಾಯ ಸಹಕಾರದಿಂದ ನಾವಿಕರ ಒಂದು ದೊಡ್ಡ ಪಡೆಯನ್ನೂ ಕಾಲಾಳುಗಳ ಒಂದು ದೊಡ್ಡ ಸೈನ್ಯವನ್ನೂ ಕೂಡಿಸಿಕೊಂಡು ಗ್ರೀಕರ ಮೇಲೆ ಬೀಳುತ್ತಾನೆ. ಪೂರ್ತಿಯಾಗಿ ಸೋತುಹೋಗುತ್ತಾನೆ. ಈ ಸೋಲೇ ನಾಟಕಕ್ಕೆ ವಿಷಯವಾದರೂ ಆ ಸೋಲನ್ನು ಪ್ರದರ್ಶಿಸುವುದಕ್ಕಿಂತ ಅದರಿಂದ ನಿಷ್ಪನ್ನವಾಗುವ ಧರ್ಮತತ್ತ್ವವನ್ನು ವಿಶದಪಡಿಸುವುದು ನಾಟಕದ ಉದ್ದೇಶವಾಗಿದೆ.

ನಾಟಕ ಪ್ರಾರಂಭವಾದಾಗ ಕ್ಷಯಾರ್ಷ ಯುದ್ಧಕ್ಕೆ ತೊಡಗಿ ಕೆಲಕಾಲ ವಾಗಿದೆ. ಹಿಂದುಳಿದ ಹಿರಿಯರು—ಅವರೇ ಮೇಳದವರು—ತಮ್ಮ ಸೈನ್ಯದ ವಿಷಯದಲ್ಲಿ ವಿಶ್ವಾಸವುಳ್ಳವರಾಗಿದ್ದರೂ ದೈವ ಮೋಸ ಮಾಡಿದರೆ ಹೇಗೆ ಎಂದು ಆತಂಕ ಪಡುತ್ತಿದ್ದಾರೆ. ಚಕ್ರವರ್ತಿಯ ತಾಯಿ ಹುತೌಷಳಾದರೂ ಅಲ್ಲಿ ತನ್ನ ಮಗನ ದುಡುಕಿನಿಂದ ದರ್ಯಾವುಷನ ಕಾಲದ ಸಾಮ್ರಾಜ್ಯ ವೈಭವ

ಅಳಿಯುತ್ತದೆಯೋ ಎಂದು ಹೆದರಿದ್ದಾಳೆ. ಅಶುಭ ಸೂಚಕ ಕನಸನ್ನು ಕಂಡಿದ್ದಾಳೆ. ಇಬ್ಬರು ಚೆಲುವೆಯರು—ಒಬ್ಬಳು ಏಷ್ಯದವಳು, ಇನ್ನೊಬ್ಬಳು ಡೋರಿಕಳು—ಜಗಳ ತೊಡಗಿದಾಗ ಕ್ಷಯಾರ್ಷ ಅವರನ್ನು ರಥಕ್ಕೆ ಹೂಡುತ್ತಾನೆ. ಏಷ್ಯದವಳು ಒಗ್ಗಿಸಿಂದಿರುತ್ತಾಳೆ. ಇನ್ನೊಬ್ಬಳು ನೊಗವನ್ನು ಸಹಿಸದೆ ಕ್ಷಯಾರ್ಷ ನೆಲಕ್ಕುರುಳುವಂತೆ ಮಾಡುತ್ತಾಳೆ. ಇದಿಷ್ಟು ಸಾಲದೆಂಬಂತೆ ಬೆಳಗಿನಲ್ಲಿ ಮಿಥ್ರದೇವನ ಪೂಜೆಗೆಂದು ಹೋದಾಗ ವೇದಿಕೆಯ ಮೇಲೆ ಬಂದು ಬಿದ್ದ ಗರುಡ ಪಕ್ಷಿಯೊಂದನ್ನು ಸಣ್ಣ ಗಿಡುಗ ಒಂದು ಕುಕ್ಕುತ್ತದೆ. ರಾತ್ರಿಯ ಕನಸು ಮತ್ತು ಬೆಳಗಿನ ಉತ್ಪಾತ ಆಕೆಗೆ ಸೋಲಿನ ಸೂಚನೆಗಳಾಗಿ ಕಂಡಿವೆ. ಗ್ರೀಕರ ವಿಷಯ ತಿರಸ್ಕಾರದಿಂದ ಮೇಳದವರನ್ನು ಕೇಳುತ್ತಾಳೆ. ತಮ್ಮನ್ನು ತಾವೇ ಆಳುವವರು ಅವರು, ಅವರ ಬಲವನ್ನು ದರ್ಯಾವುಷ ಬಲ್ಲ ಎಂದು ಮೇಳದವರು ಹೇಳಿ ಹಿಂದಿನ ಸೋಲಿನ ನೆನಪನ್ನು ತಂದುಕೊಡುತ್ತಾರೆ.

ಕಂಗಾಲಾದ ದೂತನೊಬ್ಬ ಪ್ರವೇಶಿಸಿ ಕ್ಷಯಾರ್ಷನ ಸೋಲಿನ ಸಮಾಚಾರವನ್ನು ತಿಳಿಸುತ್ತಾನೆ. ಗ್ರೀಕರ ಹೂಟವನ್ನು ತಿಳಿಯದೆ ಅವರ ಮೇಲೆ ಬಿಟ್ಟ ನಮ್ಮ ಹಡಗು ಪಡೆ ಪುಡಿಯಾಯಿತೆಂದೂ ವೀರರೆಲ್ಲ ಮಡಿದು ಅಳಿದುಳಿದ ಸೈನ್ಯ ದಿಕ್ಕುಕೆಟ್ಟು ಹಿಮ್ಮೆಟ್ಟಿದಾಗ ವಿಪತ್ತುಗಳಿಗೀಡಾಗಿ ನಾಶವಾಯಿತೆಂದೂ, ಕ್ಷಯಾರ್ಷನೊಬ್ಬ ಬದುಕಿಕೊಂಡು ಹಿಂದಿರುಗುವನೆಂದೂ ಯುದ್ಧದ ವಿವರಗಳನ್ನು ಸಾದ್ಯಂತವಾಗಿ ತಿಳಿಸುತ್ತಾನೆ. ಶೋಕಾಕುಲರಾದ ಮೇಳದವರು ಮತ್ತು ಹುತೌಷ ದರ್ಯಾವುಷನ ಪ್ರೇತವನ್ನು ಆಹ್ವಾನಿಸಿ, ಇದೇಕೆ ಹೀಗಾಯಿತು, ಮುಂದೇನು ಗತಿ, ಎಂದು ಸಲಹೆ ಪಡೆಯುವುದೆಂದು ಪೂಜೆ ಸಲ್ಲಿಸಿ ಆತನನ್ನು ಬರಮಾಡಿಕೊಳ್ಳುತ್ತಾರೆ. ದರ್ಯಾವುಷ ಸಮಾಧಿಯಿಂದೆದ್ದು ಮಗನ ದುಡುಕಿನಿಂದ ಸೋಲುಂಟಾಯಿತೆಂದು ಹೇಳುತ್ತಾನಲ್ಲದೆ ಬಂದ ಸೋಲು ಕೊನೆಯದಲ್ಲ ಎಂದೂ ಎಚ್ಚರಿಸುತ್ತಾನೆ.

ದರ್ಯಾವುಷನ ಪ್ರೇತ ಹೊರಟುಹೋದ ಮೇಲೆ ಮುಂದಿನ ಗತಿಯನ್ನು ಕುರಿತು ಮೇಳದವರು ಚಿಂತಿಸುತ್ತಿದ್ದಾಗ ಚಿಂದಿ ಬಟ್ಟೆಗಳನ್ನುಟ್ಟು ಶೋಕಾರ್ತನಾದ ಕ್ಷಯಾರ್ಷ ಪ್ರವೇಶಿಸುತ್ತಾನೆ. ಆತನನ್ನು ಸಹಾನುಭೂತಿಯಿಂದ ಕಾಣ



ಬೇಕೆಂದು ತಂದೆತಾಯಿಗಳಿಬ್ಬರೂ ಹೇಳಿದ್ದರೂ ನಾಡಿನ ವೀರರೆಲ್ಲರನ್ನು ಕಳೆದುಕೊಂಡು ಶೋಕತಪ್ತರಾಗಿದ್ದ ಮೇಳದವರು ಸಹಾನುಭೂತಿ ಇದ್ದರೂ ಮೂದಲಿಸುವಂತೆ ಅವನೇನಾದ, ಇವನೇನಾದ, ಎಂದು ವಿಚಾರಿಸುತ್ತಿದ್ದಾಗ ಅದೆಲ್ಲವನ್ನು ಕೇಳುವುದಕ್ಕಿಂತ ತನ್ನ ಕೊರಳನ್ನು ಕೊಯ್ಯಬಾರದೆ ಎಂದು ಕ್ಷಯಾರ್ಷ ಹಲುಬುತ್ತಾನೆ. ಇಬ್ಬರೂ ಬಗೆಬಗೆಯಾಗಿ ತಮ್ಮ ಶೋಕವನ್ನು ತೋಡಿಕೊಳ್ಳುತ್ತಾರೆ. ಮತ್ತೆ ರಾಜ್ಯ ಮೆರೆಯುವುದೆ. ಬೆಳೆಯುವುದೆ, ಎಂದು ಕ್ಷಯಾರ್ಷ ಕೇಳಿದಕ್ಕೆ ಮೆರೆಯಲಿ, ಬೆಳೆಯಲಿ, ಎಂದು ಮೇಳದವರು ತಮ್ಮ ಆಕಾಂಕ್ಷೆಯನ್ನು ಹೇಳುತ್ತಾರಲ್ಲದೆ ಭರವಸೆಯನ್ನು ಹೇಳುವುದಿಲ್ಲ. ಸಾಮ್ರಾಜ್ಯಕ್ಕೆ ಗತಿ ದೇವರು, ಅದನ್ನು ಕಾಯುವುದು ಧರ್ಮ ಎನ್ನುವ ಅವರ ಮಾತುಗಳೊಂದಿಗೆ ನಾಟಕ ಮುಗಿಯುತ್ತದೆ.

ರಂಗಸ್ಥಳದ ಮೇಲೆ ಕುತೂಹಲಕಾರಿಯಾಗಿ ಸನ್ನಿವೇಶವನ್ನು ಬೆಳೆಯಿಸುವುದು ಈಸ್ಕಿಲಸ್‌ನ ರೀತಿಯಲ್ಲ. ಆಗಲೆ ನಡೆದು ಹೋದ ಒಂದು ಅಪಕೃತ್ಯದ ಪರಿಣಾಮ ಪರಂಪರೆಯನ್ನು, ಅದರಿಂದ ರೂಪುಗೊಳ್ಳುವ ದುರಂತವನ್ನು ತೋರಿಸಿ ಅದೇಕೆ ಹೀಗೆ ನಡೆಯಿತು ಎಂಬ ವಿಚಾರದತ್ತ ಗಮನ ಸೆಳೆಯುವುದು ಅವನ ರೀತಿ. ಇಲ್ಲಿಯಾದರೂ ದುರಂತಕಾರಕವಾದ ಯುದ್ಧ ಮುಗಿದಿದೆ. ರಂಗಸ್ಥಳದ ಮೇಲೆ ನಾವು ಕಾಣುವ ಕ್ರಿಯೆ ನಾಲ್ಕು ಹಂತಗಳಲ್ಲಿ ಕಾಣಿಸಿಕೊಳ್ಳುತ್ತದೆ. ಮೊದಲ ಹಂತದಲ್ಲಿ ನಿರೀಕ್ಷೆ, ಆತಂಕ, ಭಯ : ಎರಡನೆಯದರಲ್ಲಿ ಸೋಲಿನ ವಿವರಣೆ ; ಮೂರನೆಯದರಲ್ಲಿ ಸೋಲಿನ ಕಾರಣ ಮೀಮಾಂಸೆ ; ಕೊನೆಯದರಲ್ಲಿ ಸೋಲಿಗಾಗಿ ಶೋಕ ಸಂತಾಪ, ಹೀಗೆ ಇದ್ದಷ್ಟು ನಾಟಕ ಕ್ರಿಯೆ ಬೆಳೆಯುತ್ತದೆ. ದರ್ಯಾವುಷ ಸಮಾಧಿಯಿಂದ ಎದ್ದು ಕಾಣಿಸಿಕೊಳ್ಳುವ ಸನ್ನಿವೇಶವೊಂದನ್ನು ಬಿಟ್ಟರೆ ಉಳಿದ ಮೂರರಲ್ಲಿ ನಾವು ಪ್ರಧಾನವಾಗಿ ಕೇಳುತ್ತಿರುವುದು ಮೊದಲು ದೂತನ ಯುದ್ಧ ವಿವರಣೆಯನ್ನು ಮತ್ತು ಮೇಳದವರ ಪ್ರತಿಕ್ರಿಯೆಯನ್ನು. ಆದರೂ ಮೊದಲ ಹಂತದಲ್ಲಿಯ ನಿರೀಕ್ಷೆ ಕುತೂಹಲಗಳಿಗೆ ಸರಿಯಾಗಿ ದೂತ ಬಂದು ವಿವರಣೆಯನ್ನು ಒದಗಿಸುತ್ತಾನೆ. ದರ್ಯಾವುಷನ ಪ್ರೇತ ಹೊರಟು ಹೋದಾಗ

ಮುಂದೇನು ಎಂದುಕೊಳ್ಳುತ್ತಿದ್ದಂತೆ ಸೋತ ಕ್ಷಯಾರ್ಷ ಸೋಲಿನ ಪ್ರತ್ಯಕ್ಷ ನಿದರ್ಶನವಾಗಿ ಚಿಂದಿ ಬಟ್ಟೆಗಳಲ್ಲಿ ಪ್ರವೇಶಿಸುತ್ತಾನೆ. ಮತೌಷಳ ಪ್ರವೇಶ, ದೂತನ ಆಗಮನ, ದರ್ಯಾವುಷನ ಪುನರುತ್ಥಾನ, ಕ್ಷಯಾರ್ಷನ ಪ್ರವೇಶ, ಇವೆಲ್ಲ ಸನ್ನಿವೇಶವನ್ನು ಕುತೂಹಲಕಾರಿಯಾಗಿ ಬೆಳೆಯಿಸುತ್ತವಾದರೂ ಕ್ರಿಯೆ ಎನ್ನಬಹುದಾದ ಹೆಚ್ಚಿನ ಯಾವುದೂ ರಂಗಸ್ಥಳದ ಮೇಲೆ ನಡೆಯುವುದಿಲ್ಲ.

ದರ್ಯಾವುಷನ ಪುನರುತ್ಥಾನದ ಸನ್ನಿವೇಶವೇ ನಾಟಕದ ಕೇಂದ್ರಭಾಗ. ಸಮಾಧಿಯ ಎದುರಿನಲ್ಲಿ ಮೇಳದವರು ನಡೆಸುವ ಪ್ರಾರ್ಥನೆ, ಆತನ ಬರವಿಗಾಗಿ ಕಾಯುತ್ತಿರುವ ಮತೌಷ, ಕ್ರಮವಾಗಿ ಆತ ಸಮಾಧಿಯಿಂದ ಹೊರ ಬರುವುದು ನಾಟಕದ ದೃಶ್ಯಭಾಗ ಕುತೂಹಲಕಾರಿಯಾಗುವಂತೆ ಮಾಡುತ್ತವೆ. ಆದರೆ ಈಸ್ಕಿಲಸ್ ಅದರ ಯೋಜನೆಯನ್ನು ಅಷ್ಟಕ್ಕಾಗಿ ಮಾಡಲಿಲ್ಲ. ಸಾಮ್ರಾಜ್ಯದ ಪ್ರತಿನಿಧಿಗಳಾದ ಮೇಳದವರಿಗೆ, ಮತೌಷಳಿಗೆ ಇಂಥ ಭಯಂಕರ ಸೋಲು ಹೇಗೆ ಆಯಿತು. ಏಕೆ ಆಯಿತು, ಎನ್ನುವುದನ್ನು ತಿಳಿಯಬೇಕಾಗಿದೆ. ಅದನ್ನು ಹೇಳಬಲ್ಲವ ಇಲ್ಲಿಯ ಶೋಕ ತಾಪಗಳಿಂದ ದೂರವಾಗಿದ್ದ ದರ್ಯಾವುಷ ಒಬ್ಬನೇ. ಆತನ ಮಾತುಗಳಲ್ಲಿ ಈಸ್ಕಿಲಸ್ ನಾಟಕದ ಅರ್ಥಗರ್ಭವನ್ನು ಅಡಗಿಸಿದ್ದಾನೆ. "ಅಳವು ಮೀರಿ ಆತ್ಮಗೆಟ್ಟ" ತನ್ನ ಮಗನ ಯೌವನದ ಮದ ಸೊಕ್ಕಿತು. ಹೆಲಿಸ್ಪಾಂಟನ್ನು ಅಡ್ಡಗಟ್ಟುವೆ ಎಂದ. ಬಾಸ್ಪರಸ್ಸಿನ ತೆರೆಗಳನ್ನು ತಡೆಯುವೆ ಎಂದ. ಸೃಷ್ಟಿ ಸಹಜವಾದ ಭೂತ ಬಲವನ್ನು ಮೆಟ್ಟಿ ಮೀರಿಸುವೆ ಎಂದ. ಮರ್ತ್ಯನಾದ ತಾನು ಅಮರ್ತ್ಯರೊಡನೆ ಸೆಣಸಿ ಕೆಟ್ಟ ಎನ್ನುತ್ತಾನೆ. ಅಷ್ಟು ಮಾತ್ರವಲ್ಲ, ಹೆಲಾಸಿಗೆ ಹೋದ ಸೈನಿಕರು ಕೊಬ್ಬಿ ದೇವಾಲಯಗಳಿಗೆ ಕಿಚ್ಚಿಕ್ಕಿ ಸೂರೆಗೈದರು. ಮಾಡಿದ ಈ ಪಾಪಗಳ ಫಲವನ್ನುಣ್ಣದಿರಲಾಗುತ್ತದೆಯೇ ? ಡೋರಿಕರ ಈಟಿಗಳಿಗೀಡಾದ ಹೆಣಗಳು ಪಾಠ ಹೇಳಿಕೊಡುತ್ತವೆ—"ಅಳ್ಗಲ್ಲ, ಮರ್ತ್ಯಂಗೆ ಹೆಮ್ಮೆ ಬಗೆ, ಎಚ್ಚರಿಕೆ," ಎಂದು. ದರ್ಯಾವುಷನ ಈ ಮಾತುಗಳು ಎರಗಿದ ಕೇಡನ್ನು ಅರ್ಥವಿಸಿ ಹೇಳುತ್ತವೆ. ದುರಂತದ ಮೂಲವನ್ನು ವಿವರಿಸುತ್ತವೆ.

ಸೋತು, ಗತಿಗೆಟ್ಟವನಾಗಿ, ನಾಟಕದ ಕೊನೆಯಲ್ಲಿ ಪ್ರವೇಶಿಸುವ ಕ್ಷಯಾರ್ಷನನ್ನು ನಾಟಕದ ನಾಯಕನೆನ್ನಬಹುದೆ ? ಎಂಬ ಪ್ರಶ್ನೆಗೆ ಅವಕಾಶ

ಹಿದೆ. ಆತ ಶೂರನಿದ್ದಿರಬಹುದು : ಆದರೆ ಸೋಲನ್ನು ಎದುರಿಸುವ ಚೈತನ್ಯ ಆತನಲ್ಲಿಲ್ಲ. ಸೋತರೂ ದೊಡ್ಡವನಾಗಿ ಕಾಣುವ ದುರಂತ ನಾಯಕನ ಹಿರಿಯ ಸತ್ವದ ಯಾವ ಲಕ್ಷಣವೂ ಆತನಲ್ಲಿ ಕಾಣುವುದಿಲ್ಲ. ದರ್ಯುವುಷನ ಮಗನಾದ್ದರಿಂದ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿದ್ದ ಆತನಿಗೆ ಸೋಲಿಗೆ ಮೊದಲು ಸಲ್ಲುತ್ತಿದ್ದ ಗೌರವ ಆತನ ಸ್ಥಾನಕ್ಕೆ ಸೇರಿದ್ದು. ಸೋಲಿನ ನಂತರ ಆತನ ತಾಯಿತಂದೆಗಳ ಹೊರತು ಯಾರೂ ಆತನ ಬಗೆಯಲ್ಲಿ ಹೆಚ್ಚಿನ ಸಹಾನುಭೂತಿಯನ್ನು ತೋರಿಸಿದಂತೆ ಕಾಣುವುದಿಲ್ಲ. ತಾಯಿ ಹುತೌಷ ಆತನನ್ನು ಎದುರುಗೊಳ್ಳುವುದಿಲ್ಲ. ಮೇಳದವರು ಚುಚ್ಚಿ ಪ್ರಶ್ನೆ ಕೇಳುತ್ತಾರೆ. ಇವನೆಂಥ ನಾಯಕ ಎನ್ನಬೇಕಾಗುತ್ತದೆ. ಇದಕ್ಕೆ ಒಂದೇ ಉತ್ತರ ಸಾಧ್ಯ. ಈ ನಾಟಕದಲ್ಲಿ ಈಸ್ಕಿಲಸ್ ಚಿತ್ರಿಸಿರುವುದು ಕ್ಷಯಾರ್ಷನ ದುರಂತವನ್ನಲ್ಲ. ಪಾರಸಿಕರ ಸಾಮ್ರಾಜ್ಯದ ದುರಂತವನ್ನು. ಸೋಲಿನ ವರ್ತಮಾನ ಬಂದ ನಂತರ ಮೇಳದವರು ಶೋಕಿಸುವುದು ಕಣ್ಮರೆಯಾದ ನಾಡಿನ ವೀರರಿಗಾಗಿ, ಅಳಿದು ಹೋದ ಸಾಮ್ರಾಜ್ಯಕ್ಕಾಗಿ. ದರ್ಯುವುಷನ ಕಾಲದ ವೈಭವವನ್ನು ನೆನೆಯುವುದರ ಮೂಲಕ ಇದು ಮತ್ತೂ ಸ್ಪಷ್ಟವಾಗುತ್ತದೆ. “ಪರ್ಸಿಕಿನ್ನಾರ್ ಪೂಜೆ ಸಲಿಪರು ? ಪರ್ಮೆ ಮುಗಿಯಿತ್ತು” ಎನ್ನುವುದು ಅವರ ಅಳಲು. ಆ ದೃಷ್ಟಿಯಿಂದ ಕ್ಷಯಾರ್ಷ ಸಾಮ್ರಾಜ್ಯದ ದುರಂತಕ್ಕೆ ಒಂದು ನಿಮಿತ್ತ ಮಾತ್ರ. ಅವನ ಕೊಬ್ಬು ಒಂದೇ ಕಾರಣವಾಗಲಿಲ್ಲ. ಸೈನಿಕರು ದೇವಾಲಯಗಳಿಗೆ ಬೆಂಕಿ ಇಟ್ಟರು. ಅವನ್ನು ಸೂರೆಗೈದರು.

ಸಾಲಾಮಿಸ್‌ನಲ್ಲಿಯ ವಿಜಯ ಗ್ರೀಕರಿಗೆ ಹೆಮ್ಮೆ ತರುವಂಥದಾಗಿದ್ದರೂ ಗ್ರೀಕನೇ ಆಗಿದ್ದ ಈಸ್ಕಿಲಸ್ ಹೆಮ್ಮೆಗೆ ಅವಕಾಶ ಕೊಡದ ರೀತಿಯಲ್ಲಿ ಯುದ್ಧವನ್ನು ಪಾರಸಿಕರ ದೃಷ್ಟಿಯಿಂದ ಕಂಡು ನಾಟಕವನ್ನು ಬರೆದಿದ್ದಾನೆ. ಗ್ರೀಕರ ವಿಜಯ ದೊಡ್ಡದೇ ಆದರೂ ಆತನ ದೃಷ್ಟಿಯಲ್ಲಿ ತಮ್ಮ ಸೋಲಿನಿಂದ ಕಲಿತ ಅಥವಾ ಕಲಿಯಬೇಕಾದ ಪಾಠ ಮತ್ತೂ ದೊಡ್ಡದಾಗಿ ಕಂಡಿತು. ಸೋತವರು ಮಾತ್ರವಲ್ಲದೆ ಗೆದ್ದವರೂ ಅರಿತಿರಬೇಕಾದ ಪಾಠ ಅದು. ಸೊಕ್ಕು ಸಲ್ಲದು, ದುಡುಕು ಸಲ್ಲದು, ಹೆಬ್ಬಲದ ಹೆಮ್ಮೆ ಸಲ್ಲದು, ದೇವತೆಗಳ ಕೋಪವನ್ನು ಕೆರಳಿಸುವ ಯಾವುದೂ ಸಲ್ಲದು; “ಆಳ್ಗಲ್ಲ ಮರ್ತ್ಯಂಗೆ

ಹೆಮ್ಮೆ ಬಗೆ" ಎನ್ನುವುದೇ ಆ ಪಾಠ. ತನ್ನ ನಾಡಿನ ವಿಜಯವನ್ನು ನಾಟಕದ ವಿಷಯವನ್ನಾಗಿಸಿಕೊಂಡಿದ್ದರೆ ತಿಳಿಸಬೇಕೆಂದ ಈ ಧರ್ಮತತ್ವವನ್ನು ತಿಳಿಸುವುದು ಸಾಧ್ಯವಾಗುತ್ತಿರಲಿಲ್ಲ. ತಪ್ಪಿಗೆ ಶಿಕ್ಷೆ ತಪ್ಪಿದ್ದಲ್ಲ. ವಿಧಿಯನ್ನು ಮೀರಿಸಿದವರಿಲ್ಲ. ಎಂಬ ಎರಡು ವಿಚಾರಗಳನ್ನು ಆಧರಿಸಿಯೇ ಗ್ರೀಕರ ರುದ್ರನಾಟಕ ಪರಂಪರೆ ಬೆಳೆದಿದೆ. ಈ ಎರಡು ವಿಚಾರಗಳನ್ನು ಈ ನಾಟಕದಲ್ಲಿ ಕಾಣುತ್ತೇವೆ. ಕ್ಷಯಾರ್ಷ ತನ್ನ ಸಾಮ್ರಾಜ್ಯವನ್ನು ಕಳೆದುಕೊಂಡ ಎನ್ನುವುದಕ್ಕಿಂತ ಅವನ ಮೂಲಕ ಒಂದು ಮಹಾಸಾಮ್ರಾಜ್ಯ ಅಳಿಯಿತು ಎನ್ನುವುದು ಹೆಚ್ಚಿನ ಅರ್ಥವ್ಯಾಪ್ತಿಯುಳ್ಳ ದುರಂತವಾಗುತ್ತದೆ. "ಮಿತಿಯರಿತು ನೆಗಳ್ವರ್ಗೆ ದೇವರ್ಕಳ್ ಒಲೆದಪರ್, ಮುರಿದಪರ್ ಮಿಕ್ಕರನ್" ಎಂದು "ಅಶ್ವತ್ಥಾಮನ್" ನಾಟಕದಲ್ಲಿ ರುದ್ರ ಹೇಳಿದ ಮಾತು, "ದೈವದ ಮುಂದೆ ನಾವಲ್ತು" ಎಂದು "ಗದಾಯುದ್ಧ" ದಲ್ಲಿ ದುರ್ಯೋಧನ ಹೇಳಿದ ಮಾತು ನೆನಪಿಗೆ ಬರುತ್ತದೆ. ಈ ನಾಟಕವಾದರೂ ತತ್ವಮನಾದ ಜೀವನ ದರ್ಶನವನ್ನು ಒಳಗೊಂಡಿದೆ ಎಂಬ ಕಾರಣಕ್ಕಾಗಿಯೇ ಶ್ರೀಯವರು ಇದನ್ನು ಅನುವಾದಕ್ಕಾಗಿ ಆಯ್ದುಕೊಂಡಿರುವುದು ಸಾಧ್ಯವಿದೆ.

ಈ ನಾಟಕದಲ್ಲಿ ಮೇಳದವರು ಮೊದಲಿಂದ ಕೊನೆಯವರೆಗೆ ರಂಗಸ್ಥಳದ ಮೇಲಿರುತ್ತಾರೆ. ದರ್ಯವುಷನನ್ನು ಸಮಾಧಿಯಿಂದ ಆಹ್ವಾನಿಸುವುದೊಂದನ್ನು ಬಿಟ್ಟರೆ ನೇರವಾಗಿ ಅವರು ನಾಟಕದಲ್ಲಿಯೇ ಕ್ರಿಯೆಯನ್ನು ಮುಂದುವರಿಸುವ ಏನನ್ನೂ ಮಾಡುವುದಿಲ್ಲ. ಪಾರಸಿಕರ ಜನಾಂಗವನ್ನು ಪ್ರತಿನಿಧಿಸುವ ಒಂದು ಸಮುದಾಯ ಪಾತ್ರವಾಗಿ ಹಿಂದಿನವರ ಬಗೆಯಲ್ಲಿ ಅಭಿಮಾನವನ್ನು, ಇಂದಿನವರ ಬಗೆಯಲ್ಲಿ ಶೋಕಸಂತಾಪಗಳನ್ನು, ಮುಂದಿನದರ ಬಗೆಯಲ್ಲಿ ಆತಂಕವನ್ನು ವ್ಯಕ್ತಪಡಿಸುವ ಕೆಲಸವನ್ನು ಮಾಡುತ್ತಾರೆ. ಇಡೀ ನಾಟಕದಲ್ಲಿಯ ಅರ್ಧದಷ್ಟು ಪಂಕ್ತಿಗಳನ್ನು ಅವರೇ ಹೇಳುತ್ತಾರೆ. ಅದರಲ್ಲಿಯ ಅರ್ಧ ಸನ್ನಿವೇಶಗಳಿಗೆ ತಕ್ಕಂತೆ ಭಾವಗೀತಗಳಾಗಿ ಹೊಮ್ಮುತ್ತದೆ. ಮೇಳದವರ ಈ ಗೀತಭಾಗ, ಅದರಲ್ಲಿಯೂ ವಿಶೇಷವಾಗಿ ಅವರು ಎರಡು ಭಾಗವಾಗಿ ನಿಂತು ಒಂದೊಂದು ಭಾವದ ಬೇರೆ ಬೇರೆ ಪರಿಗಳನ್ನು ಹಾಡುಗಳಾಗಿ ಹೇಳಿಕೊಳ್ಳುವ ಭಾಗ, ನಾಟಕದಲ್ಲಿಯ ಕ್ರಿಯೆಯ ಅಭಾವವನ್ನು ಸಂಗೀತದ

ಮೂಲಕ ತುಂಬಿಕೊಟ್ಟು ಸಹಕರಿಸುತ್ತವೆ. ಈ ಹಾಡುಗಳಲ್ಲಿಯ ಪದ
ಯೋಜನೆ, ಭಾವದ ಮಿಡಿತಕ್ಕೆ ಸಂವಾದಿಯಾಗಿ ಅವು ನುಡಿಯುವ ಬಗೆ, ದ್ರುತ
ವಾಗಿಯೋ ವಿಲಂಬಿತವಾಗಿಯೋ ಸಾಗುವ ರೀತಿ, ಭಾವಪ್ರಕಾಶನಕ್ಕೆ ಪೋಷಕ
ವಾಗಿ ಕೆಲಸ ಮಾಡುತ್ತವೆ. ಇಲ್ಲಿಯ ಅನೇಕ ಭಾವಗೀತೆಗಳು ಅನುವಾದ
ಗಳೆಂದು ಗುರುತಿಸಲಾಗದ ಸ್ವಂತಿಕೆಯನ್ನು ಸಾಧಿಸಿವೆ. ನಾಟಕದಲ್ಲಿ ಗದ್ಯ ಸಾಧಿಸ
ಲಾಗದ, ಸನ್ನಿವೇಶರೂಪಣ ಮಾತ್ರದಿಂದ ಸಿದ್ಧಿಸದ, ಬೇರೊಂದು ಭಾವಾ
ವರಣವನ್ನು ಈ ಗೀತಭಾಗ ಸೃಷ್ಟಿಸುತ್ತದೆ. ನಾಟಕಾನುಭವವನ್ನು ಶ್ರೀಮಂತ
ವಾಗಿಸುತ್ತದೆ. ಮೇಳಗಾನದ ಮೂಲಕ ಸಾಧಿಸಬಹುದಾದ ವಿಶಿಷ್ಟ ಪರಿಣಾ
ಮಕ್ಕೆ ಈ ನಾಟಕ ಒಂದು ಒಳ್ಳೆಯ ಉದಾಹರಣೆಯಾಗಬಲ್ಲದು.

(೧೨)

ಶ್ರೀಯವರು ಬದುಕಿದ್ದಾಗ ಪ್ರಕಟವಾದ ಅವರ ಕೊನೆಯ ಗ್ರಂಥ
"ಹೊಂಗನಸುಗಳು". ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಹದಿನಾಲ್ಕು ಕವನ
ಗಳನ್ನು ಒಳಗೊಂಡಿದೆ. ಇಲ್ಲಿಯ ರಚನೆಗಳು ಕನ್ನಡದ ಬಗೆಯಲ್ಲಿಯ ಅವರ
ಅಭಿಮಾನ ಆದರ್ಶಗಳನ್ನು, ಮೈಸೂರು ಅರಸರ ವಿಷಯದಲ್ಲಿಯ ನಿಷ್ಠೆ
ಗೌರವಗಳನ್ನು ಮುಖ್ಯವಾಗಿ ವ್ಯಕ್ತಪಡಿಸುತ್ತವೆ. ಹೊಸ ರೀತಿಯ ಪ್ರವರ್ತ
ಕರಾದ ಅವರು ಹಳೆಯ ಕಾವ್ಯದ ರೀತಿಯನ್ನೂ ಬಳಸಬಲ್ಲವರಾಗಿದ್ದರೆನ್ನುವು
ದನ್ನು ಇಲ್ಲಿಯ ಒಂದೆರಡು ರಚನೆಗಳು ತೋರಿಸಿಕೊಡುತ್ತವೆ. "ಭರತ
ಮಾತೆಯ ನುಡಿ" ಸ್ವಾತಂತ್ರ್ಯದ ಹಂಬಲವನ್ನಲ್ಲದೆ ನಮ್ಮ ಹಿಂದಿನ ಹಿರಿಮೆಯೇ
ನಮಗೆ ಹೊರೆಯಾಗಿ ಪ್ರಗತಿಗೆ ಪ್ರತಿಬಂಧಕವಾಗಿದೆ ಎಂಬ ಭಾವವನ್ನು
ವ್ಯಕ್ತಪಡಿಸುತ್ತದೆ. ಹಿಂದಿನವರು ತೋರಿದ ಸತ್ಯವನ್ನು ಕಡೆಗಣಿಸಿ ಜಾತಿ
ಮತ ಪಂಥಗಳನ್ನು ಬೆಳೆಯಿಸಿಕೊಂಡ ಭಾರತ ತನ್ನ ಜಡತೆಯನ್ನು ಪರಿಹರಿಸಿ
ಕೊಳ್ಳುವುದಕ್ಕೆ "ತಂಗಿ ಬ್ರಿಟಾನಿಯಳ" ನೆರವನ್ನು ಪಡೆಯಬೇಕಾಯಿತು.
ಹಳೆಹೊಸತುಗಳ ಸಮನ್ವಯದಿಂದ ಮತ್ತೆ ಹಿರಿಮೆಯನ್ನು ಸಾಧಿಸುವ
ಸಂಕಲ್ಪದೊಂದಿಗೆ ಕವನ ಕೊನೆಗೊಳ್ಳುತ್ತದೆ. ಇಲ್ಲಿ ಮತ್ತು ಇನ್ನು ಕೆಲವು
ಕವನಗಳಲ್ಲಿ ಶ್ರೀಕಂಠಯ್ಯನವರು ಇಂಗ್ಲಂಡ್ ವಿಷಯದಲ್ಲಿ ವ್ಯಕ್ತಪಡಿಸುವ

ಅಭಿಮಾನ ಅವರನ್ನು ಭಾರತ ಸ್ವಾತಂತ್ರ್ಯದ ವಿರೋಧಿಗಳೆಂಬ ಅನ್ಯಾಯದ ಅಪಾದನೆಗೆ ಗುರಿಯಾಗಿಸಿದೆ. ಇಂಗ್ಲಿಷ್ ವಿದ್ಯಾಭ್ಯಾಸದ ಮೂಲಕವೇ ನಮ್ಮಲ್ಲಿ ಒಕ್ಕಟ್ಟಿನ ಭಾವನೆ, ಸ್ವಾತಂತ್ರ್ಯಾಪೇಕ್ಷೆ ಮಾನವವ್ಯಕ್ತಿಯ ಉದಾರ ಮನೋಧರ್ಮ ಬೆಳೆಯುವಂತಾದವು ಎನ್ನುವುದನ್ನು ಒಪ್ಪುವವರು ಶ್ರೀಕಂಠಯ್ಯನವರ ಅಭಿಮಾನವನ್ನು ಅಪಾರ್ಥವಾಗಿಸಿ ಕೊಳ್ಳಲಾರರು.

ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದು ಇಪ್ಪತ್ತೈದು ವರ್ಷಗಳಾದ ಸಂದರ್ಭದಲ್ಲಿ ಬರೆದ "ರಜತೋತ್ಸವ ಪ್ರಗಾಥ" ಒಂದು ಹೊಸ ಕಾವ್ಯಪ್ರಕಾರವನ್ನು ಕನ್ನಡಕ್ಕೆ ತಂದು ಕೊಡುತ್ತದಲ್ಲದೆ ಅಂದಿನ ಉತ್ಸವದ ಸಂಭ್ರಮವನ್ನು, ದೊರೆಗಳು ಗಳಿಸಿದ್ದ ಮೆಚ್ಚಿಗೆಯನ್ನು, ಅವರು ಮಾಡಿದ ಅನೇಕ ಜನಹಿತದ ಕಾರ್ಯಗಳನ್ನು ಮುಕ್ತ ಕಂಠವಾಗಿ ಹೊಗಳುತ್ತದೆ. ಅವರಿಗೆ ಸಂಬಂಧಿಸಿದ ಇನ್ನೊಂದು ಕವನವಾದ "ಬಾನ್ ಕೊಂಡ ಕೃಷ್ಣ" ಅದೇ ರಾಜರು ನಿಧನವಾದಾಗ ಬರೆದ ಶೋಕಗೀತೆ. ಇಲ್ಲಿಯೂ ಶ್ರೀಕಂಠಯ್ಯನವರು ನಮ್ಮಲ್ಲಿಲ್ಲದ ಒಂದು ಹೊಸ ಪದ್ಯಪ್ರಕಾರವನ್ನು ಬಳಕೆಗೆ ತಂದರು. ಅಳಿದವನ ಕೀರ್ತಿಯನ್ನು ಹಾಡುವುದಕ್ಕೆ ಕಾವ್ಯದೇವಿಯ ಆವಾಹನದೊಂದಿಗೆ ಮೊದಲಾಗುವ ಈ ಪದ್ಯಪ್ರಕಾರ ಚರಾಚರ ಪ್ರಪಂಚವೆಲ್ಲವೂ ಶೋಕಾಕುಲವಾದಂತೆ ವರ್ಣಿಸಿ ಅಳಿದವ ಕೀರ್ತಿಶೇಷನಾಗಿ ಅಮರನಾಗಿದ್ದಾನೆ ಎಂದು ಮುಗಿಯುತ್ತದೆ. ಶ್ರೀಕಂಠಯ್ಯನವರ ಇಂಗ್ಲಿಷ್ ಅಭಿಮಾನದಂತೆ ಅವರ ರಾಜ ನಿಷ್ಠೆಯೂ ಟೀಕೆಗೆ ಗುರಿಯಾಗಿದೆ. ಅಂದಿನ ಕಾಲಮಾನದ ಸಂಸ್ಕೃತಿಯನ್ನು ಮತ್ತು ಮಹಾರಾಜರು ಅಂಥ ನಿಷ್ಠೆಗೌರವಗಳಿಗೆ ಅರ್ಹರಾಗಿದ್ದರೆನ್ನುವುದನ್ನು ಸಮರ್ಥನೆಯಾಗಿ ಹೇಳಬಹುದಾದರೂ ಶ್ರೀಕಂಠಯ್ಯನವರ ಮನೋಧರ್ಮದಲ್ಲಿ ಊಳಿಗಮಾನ್ಯ ಪದ್ಧತಿಯ ವಿಚಾರಗಳ ಕೆಲವೊಂದು ಎಳೆಗಳು ಇದ್ದವು ಎನ್ನುವುದನ್ನೂ ಒಪ್ಪಬೇಕಾಗುತ್ತದೆ. ಏಕೀಕೃತ ಕರ್ನಾಟಕಕ್ಕೆ ಮೈಸೂರ ಮಹಾರಾಜರು ಪ್ರಮುಖರಾಗಿರಬೇಕೆಂಬ ಅಭಿಲಾಷೆ ಅವರದಾಗಿತ್ತು. ಅದು ಹೇಗಿದ್ದರೂ ರಾಜರನ್ನು ಕುರಿತಂತೆ, ರಾಜ್ಯಾಧಿಕಾರವನ್ನು ನಡೆಸುವವರನ್ನು ಕುರಿತಂತೆ ಅವರು ಅನಗತ್ಯವೆನ್ನಬೇಕಾದ ಮಟ್ಟಿಗೆ ತಗ್ಗಿ ನಡೆಯುತ್ತಿದ್ದರೆನ್ನುವುದು ಈ ಮನೋಧರ್ಮದ ಒಂದು ಬಗೆ ಎನ್ನಬೇಕು.

ನಾಡು ನುಡಿಗಳ ವಿಷಯದಲ್ಲಿ ಶ್ರೀಕಂಠಯ್ಯನವರು ಬೆಳೆಸಿಕೊಂಡಿದ್ದ ಪ್ರೀತ್ಯಭಿಮಾನಗಳನ್ನು ಕುರಿತು ಎರಡು ಮಾತಿಲ್ಲ. ಈ ಅಭಿಮಾನ ಅವರು ಸಂಪಾದಿಸಿದ "ಕನ್ನಡ ಬಾವುಟ" ದಲ್ಲಿ ಒಂದು ರೀತಿಯಲ್ಲಾದರೆ "ಕನ್ನಡ ತಾಯಿ ನೋಟ" ದಲ್ಲಿ ಇನ್ನೊಂದು ರೀತಿಯಲ್ಲಿ ಪ್ರಕಟವಾಗುತ್ತದೆ. ಕನ್ನಡ ನಾಡನ್ನು ಸುತ್ತಿ ಅದರ ಸಿರಿ ಸೌಭಾಗ್ಯಗಳನ್ನು ನೋಡಿ ನೆನೆದು ಹಿಗ್ಗುತ್ತಿದ್ದಂತೆ ತುಂಗಭದ್ರೆಯ ತೀರದಲ್ಲಿ ಕಲ್ಲು ಹಾಸಿನ ಮೇಲೆ ಕನ್ನಡದ ಮಕ್ಕಳಿಗಾಗಿ ಕೊರಗುತ್ತ ಕುಳಿತಿದ್ದ ಕನ್ನಡ ತಾಯಿಯಿಂದ ಕೊರಗಿನ ಕಾರಣವನ್ನು ತಿಳಿದು ಆಕೆಯ ಹರಕೆಯೊಂದಿದ್ದರೆ ಯಾವುದೂ ಅದೀತೆಂಬ ಭರವಸೆಯನ್ನು ಹೇಳಿ ಆಕೆಯನ್ನು ರಥದಲ್ಲಿ ಕುಳ್ಳಿರಿಸಿ ಮಾಡುವ ಜಯಘೋಷದೊಂದಿಗೆ ಕವನ ಮುಗಿಯುತ್ತದೆ. ಭಾವಕ್ಕೆ ತಕ್ಕ ಭಾಷೆಯಲ್ಲಿ ಕಣ್ಣೆದುರು ಚಿತ್ರ ಕಟ್ಟುವಂತೆ ಮುನ್ನಡೆಯುವ ಈ ಕವನ ಕನ್ನಡದ ಸಿರಿಸೌಭಾಗ್ಯವನ್ನು, ಅಳಲು ಆಕಾಂಕ್ಷೆಗಳನ್ನು ಹೃದಯಂಗಮವಾಗಿ ಚಿತ್ರಿಸುತ್ತದೆ. ವಿಜಯನಗರದ ಷಟ್ ಸಾಂವತ್ಸರಿಕೋತ್ಸವದ ಸಂದರ್ಭದಲ್ಲಿ (ಕೊನೆಯ ಹದಿನಾಲ್ಕು ಪಂಕ್ತಿಗಳನುಳಿದು) ಇಡೀ ಪದ್ಯವನ್ನು ಶ್ರೀಯವರು ಒಂದೇ ಪೆಟ್ಟಿನಲ್ಲಿ ಹೇಗೋ ಕುಳಿತು ಒಂದು ಪದವನ್ನೂ ತೊಡೆಯದೆ ಬರೆದರೆಂದು ಹೇಳಲಾಗಿದೆ. ಇಡೀ ಪದ್ಯ ಮನಸ್ಸಿನಲ್ಲಿ ಪೂರ್ತಿಯಾಗಿ ಸಿದ್ಧವಾದ ಮೇಲೆಯೇ ಅವರು ಬರೆಯುವುದಕ್ಕೆ ತೊಡಗುತ್ತಿದ್ದರೆಂದು ಕಾಣುತ್ತದೆ.

ಮೈಸೂರು ವಿಶ್ವವಿದ್ಯಾನಿಲಯದ ರಜತ ಮಹೋತ್ಸವಕ್ಕಾಗಿ ಬರೆದ "ಶುಕ್ರಗೀತೆ" ಜ್ಞಾನವನ್ನು ಕುರಿತಂತೆ, ವಿದ್ಯೆ ಅವಿದ್ಯೆ; ಋತ ಅನೃತ, ದೇವದಾನವ ಎಂಬ ನಿತ್ಯ ಸಂಘರ್ಷವನ್ನು ತನ್ನ ವಿಷಯವಾಗಿಸಿಕೊಂಡಿದೆ. ಪ್ರಪಂಚದ ಆದಿಯಲ್ಲಿ ಸೂರ್ಯಚಂದ್ರರು ಸೃಷ್ಟಿಯಾಗುತ್ತಿದ್ದಾಗ ದಿವಿಜರು, ಋಷಿಗಳು ಆ ದಿವ್ಯದರ್ಶನವನ್ನು ಕಂಡು ಗಾಯತ್ರೀ ಮಂತ್ರವನ್ನು ಹಾಡಿ ಸತ್ಯ, ಜ್ಯೋತಿ, ಅಮೃತತ್ವವನ್ನು ಬಯಸಿ ಪ್ರಾರ್ಥಿಸಿದರು. ಆದರೆ ಆ ದರ್ಶನವನ್ನು ಒಲ್ಲದವರು ವಿಪರೀತ ಬುದ್ಧಿಯನ್ನು ಬೆಳೆಯಿಸಿದ್ದರಿಂದ ದೇವಾಸುರ ಯುದ್ಧ ಪ್ರಾರಂಭವಾಗಿದೆ. ಮಥನದಲ್ಲಿ ಹುಟ್ಟಿ ಬಂದ ಅಮೃತ

ವಿಷಗಳು ಬೇರೆಯಲ್ಲ ಎಂಬ ಅರಿವು ಮೂಡಿದಾಗ ಇಬ್ಬರೂ ವಿಷದಿಂದ ಅಮೃತವನ್ನು ಪಡೆಯಬಹುದಾಗುತ್ತದೆ. ಪುರುಷನಲ್ಲಿನ ಅಗ್ನಿಯನ್ನು ಕಾಯುವ ದೇವತೆಗಳೇ "ಋತವೊಂದೆ ಗೆಲ್ಲುವುದು, ಅನೃತವಲ್ತು" ಎಂಬ ಸಂದೇಶವನ್ನು ಬೀರುತ್ತಾರೆ. ಕೊನೆಯ ಆರು ಪಂಕ್ತಿಗಳನ್ನು ಬದಿಗಿರಿಸಿದರೆ ಇಡೀ ರಚನೆ ಒಂದು ಧೀರ ಗಂಭೀರವಾದ ನೆಲೆಯಲ್ಲಿ ಜ್ಞಾನೋಪಾಸನೆ ಯಾಗುತ್ತದೆ. ಮಾನವ ಹೃದಯದ ಒಂದು ನಿರಂತರ ಆಕಾಂಕ್ಷೆಯಾಗುತ್ತದೆ.

(೧೩)

"ಹೊಂಗನಸುಗಳು" ನಂತರ ಶ್ರೀಕಂಠಯ್ಯನವರು ಬದುಕಿರುವಾಗ ಅವರ ಯಾವ ಬರಹಗಳೂ ಪುಸ್ತಕ ರೂಪದಲ್ಲಿ ಪ್ರಕಟವಾಗಲಿಲ್ಲ. ಅವರ ನಿಧನದ ಎರಡು ವರ್ಷಗಳ ನಂತರ "ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ" ೧೯೪೮ ರಲ್ಲಿ ಪ್ರಕಟವಾಯಿತು. ಅವರು ಮಾಡಿದ ಅನೇಕ ಭಾಷಣಗಳನ್ನು, ಬರೆದ ಕೆಲವು ಮುನ್ನುಡಿಗಳನ್ನು ಮತ್ತು ಪುಸ್ತಕ ವಿಮರ್ಶೆಗಳನ್ನು ಒಂದುಗೂಡಿಸಿ ಪ್ರಕಟಿಸಲಾಗಿದೆ. ಅದಕ್ಕೂ ಮೊದಲಿಗೆ ಕನ್ನಡ ಕೈಪಿಡಿಗಾಗಿ ಅವರು ಬರೆದಿದ್ದ ಸಾಹಿತ್ಯ ಚರಿತ್ರೆಯ ಮೊದಲ ಭಾಗ ಹಾಗು ಛಂದಶ್ಶಾಸ್ತ್ರದ ಚರಿತ್ರೆ ಕೈಪಿಡಿಯ ಅಧ್ಯಾಯಗಳಾಗಿ ಪ್ರಕಟವಾಗಿದ್ದವು. ಅವರು ಬರೆದ ಸಾಹಿತ್ಯ ಚರಿತ್ರೆಯ ಭಾಗದಲ್ಲಿ ವಿಮರ್ಶೆಗಿಂತ ವಿವರಣೆ ಹೆಚ್ಚಾಗಿದೆ. ಹಿಂದಿನ ಕೃತಿಗಳ ಪರಿಚಯವೇ ಇನ್ನೂ ಸಮಗ್ರವಾಗಿ ಆಗಬೇಕಾಗಿದ್ದ ಸಂದರ್ಭದಲ್ಲಿ ಅಂಥ ವಿವರಣೆ ಅಗತ್ಯ ವಾಗಿತ್ತು. ಕೃತಿ ಹಾಗೂ ಕೃತಿಕಾರರಿಗೆ ಸಂಬಂಧಿಸಿದಂತೆ ಅನೇಕ ಸಮಸ್ಯೆಗಳು ಪರಿಹಾರಕ್ಕಾಗಿ ಕಾಯುತ್ತಿರುವಾಗ ವಿಮರ್ಶೆ ಸಮರ್ಪಕವಾಗಲಾರದು. ಅಂಥ ದಕ್ಕೆ ಇನ್ನೂ ಸಮಯ ಬೇಕು, ಎಂಬ ವಿವರಣೆಯನ್ನು ಅವರೇ ಹೇಳಿದ್ದಾರೆ. ಆದರೆ ಕೈಪಿಡಿಗಾಗಿ ಅವರು ಬರೆದ ಛಂದಶ್ಶಾಸ್ತ್ರದ ಚರಿತ್ರೆ ಮಾತ್ರ ಅಧಿಕಾರ ಯುತವಾಗಿದೆ. ಸಂಸ್ಕೃತ ಹಾಗೂ ದ್ರಾವಿಡ ಛಂದಸ್ಸನ್ನು ತಲಸ್ಪರ್ಶಿಯಾಗಿ ತಿಳಿದುಕೊಂಡಿದ್ದ ಅವರು ಕನ್ನಡದ ವಿವಿಧ ಛಂದೋ ರೂಪಗಳು ಬೆಳೆದದ್ದು ಹೇಗೆ, ಬದಲಾವಣೆಗಳಾದದ್ದು ಹೇಗೆ ಎಂಬೆಲ್ಲ ವಿಷಯಗಳನ್ನು ಕುರಿತು ಇನ್ನಿಲ್ಲವೆಂಬಂತೆ ಸೂಕ್ಷ್ಮದರ್ಶಿಯಾದ ಪ್ರತಿಪಾದನೆಗಳನ್ನು ಮಾಡಿದ್ದಾರೆ.

ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಅವರ ಈ ಪ್ರಬಂಧ ಕಡೆಗಣಿಸಲಾಗದ ಒಂದು
ಆಕರವಾಗಿದೆ. ಭಾಷೆಯಲ್ಲಿಯ ನಾದಲಯಗಳಿಗೂ ಭಾವನೆಗಳಿಗೂ ನಡುವಿನ
ಸೂಕ್ಷ್ಮ ಸಂಬಂಧಗಳನ್ನು ಗುರುತಿಸಬಲ್ಲ ಅವರ ವಿಶ್ಲೇಷಣೆ ವಿದ್ವತ್ಪೂರ್ಣ
ವಾಗಿದ್ದಷ್ಟೂ ಪದಯೋಜನೆಗಳಲ್ಲಿಯ ಲಯಕ್ಕೆ ಸೂಕ್ಷ್ಮವೇದಿಯಾಗಿ ಪ್ರತಿ
ಸ್ಪಂದಿಸುವ ಸಾಮರ್ಥ್ಯದ ಅಧಿಕಾರವನ್ನೂ ಪಡೆದುದಾಗಿದೆ.

ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ ದೊರಕುವುದು ಹೇಗೆ, ಅದಕ್ಕಾಗಿ
ಅವರು ಮಾಡಬೇಕಾದದ್ದು ಏನು ಎನ್ನುವ ಯೋಜನೆಯೇ ಶ್ರೀಕಂಠಯ್ಯ
ನವರ ಜೀವನ ಕಾರ್ಯದ ಸ್ವರೂಪವನ್ನು ನಿರ್ಧರಿಸಿತು. ಆದ್ದರಿಂದ ಅದೇ
ಕೇಂದ್ರ ವಿಷಯವಾಗಿದ್ದ ಅವರ ಬಹುಮುಖ್ಯವಾದ ಭಾಷಣಗಳನ್ನು,
ಅದಕ್ಕೆಯೇ ಸಂಬಂಧಿಸಿದ ಇತರ ಬರಹಗಳನ್ನು ಒಳಗೊಂಡ ಅವರ ಕೊನೆಯ
ಪುಸ್ತಕದ ಹೆಸರು ಅನೇಕ ವಿಧದಲ್ಲಿ ಅನ್ವರ್ಥಕವಾಗಿದೆ. ಧಾರವಾಡ ಹಾಗೂ
ಕಲಬುರ್ಗಿಯ ಭಾಷಣಗಳಲ್ಲಿಯ ಮುಖ್ಯಾಂಶಗಳನ್ನು ಆಗಲೆ ಸಂಗ್ರಹಿಸಿ
ಯಾಗಿದೆ. ಅಲ್ಲಿಯ ವಿಚಾರಗಳು ಕನ್ನಡದ ಪುನರುಜ್ಜೀವನದ ಕಾರ್ಯಕ್ಕೆ
ಹೇಗೆ ಅಡಿಪಾಯವಾಗಿವೆ ಎನ್ನುವುದನ್ನು ನೋಡಿಯಾಗಿದೆ. ಅವೆರಡಕ್ಕೆ
ಹೊರತಾಗಿ "ಕನ್ನಡಕ್ಕೆ ಒಂದು ಕಟ್ಟು" ಮತ್ತು "ಪೂರ್ವದ ಹಳಗನ್ನಡ
ಮತ್ತು ತಮಿಳು" ಎಂಬೆರಡು ಲೇಖನಗಳು ವಿಶೇಷ ಮಹತ್ವವನ್ನುಳ್ಳವಾಗಿವೆ.
ಹೊಸಗನ್ನಡದಲ್ಲಿ ಬರೆಯಬೇಕಾದಾಗ ಎದುರಿಸಬೇಕಾಗುವ ಭಾಷೆಯ ಸಮಸ್ಯೆ
ಗಳನ್ನು ಮೊದಲನೆಯದು ವಿವರವಾಗಿ ಚರ್ಚಿಸುತ್ತದೆ. ಪದಗಳ ಆಯ್ಕೆ
ಯಲ್ಲಿ, ಬೇಕಾದ ಅರ್ಥವನ್ನು ಕೊಡಬಲ್ಲ ಪದಗಳು ಇಲ್ಲದಾಗ ಅಂಥವನ್ನು
ಯೋಜಿಸಿಕೊಳ್ಳುವ ಆಯ್ಕೆಯಲ್ಲಿ, ಉಪಯೋಗಿಸಬೇಕಾದ ಪದಗಳ ರೂಪ
ವಿಶೇಷಗಳಲ್ಲಿ, ನಾವು ವಹಿಸಬೇಕಾದ ಎಚ್ಚರವನ್ನು ಸೂಕ್ಷ್ಮವಾಗಿ ತಿಳಿಸಿಕೊಡು
ತ್ತದೆ. ಸಾಮಾನ್ಯನಿಗೆ ಅರ್ಥವಾಗಬೇಕು, ಜೊತೆಗೆ ಕೇಳುವುದಕ್ಕೆ ಹಿತವಾಗಿರ
ಬೇಕು, ನುಡಿತದ ನಡೆ ಸುಗಮವಾಗಿರಬೇಕು ಎನ್ನುವುದನ್ನೇ ನಿಕಷವನ್ನಾ
ಗಿಸಿಕೊಂಡು ಒಳ್ಳೆಯ ಶೈಲಿಯನ್ನು ರೂಢಿಸಿಕೊಳ್ಳಬೇಕೆಂದವರಿಗೆ ಉತ್ತಮ
ವಾದ ಮಾರ್ಗದರ್ಶನ ಇಲ್ಲಿ ಸಿಕ್ಕುತ್ತದೆ. ಪೂರ್ವದ ಹಳಗನ್ನಡಕ್ಕೂ ತಮಿ
ಳಿಗೂ ಇರುವ ನಿಕಟ ಸಂಬಂಧದ ಸ್ವರೂಪವನ್ನು ಆ ಹೆಸರಿನ ಲೇಖನ

ಚರ್ಚಿಸುತ್ತದೆ. ಎರಡು ಭಾಷೆಗಳಿಗೂ ಸಮಾನವಾದ ವ್ಯಾಕರಣವೊಂದನ್ನು ರಚಿಸಬೇಕೆಂದುಕೊಂಡಿದ್ದ ಶ್ರೀಕಂಠಯ್ಯನವರು ಎರಡೂ ಭಾಷೆಯ ಪ್ರಯೋಗಗಳಲ್ಲಿ ಕಂಡು ಬರುವ ರೂಪರಚನೆಗಳಲ್ಲಿಯ ಸಾಮ್ಯಗಳನ್ನು ವಿಶದಪಡಿಸುತ್ತಾರೆ

ಎರಡನೆಯ ಭಾಗದಲ್ಲಿಯ "ನಾಗಚಂದ್ರ" ಮತ್ತು "ಸಂಸ್ಕೃತ ನಾಟಕಗಳು" ಕೆಲಮಟ್ಟಿಗಿನ ವಿಸ್ತಾರವನ್ನು ಪಡೆದ ಮಹತ್ವದ ಬರಹಗಳು. ನಾಗಚಂದ್ರ ಚಿತ್ರಿಸಿದ ರಾವಣನ ಪಾತ್ರವನ್ನು ಬಹುವಾಗಿ ಮೆಚ್ಚಿಕೊಂಡಿದ್ದ ಶ್ರೀಕಂಠಯ್ಯನವರು ಅಲ್ಲಿಯ ಪಾತ್ರಪೋಷಣೆಯಲ್ಲಿ ಉದಾತ್ತತೆಯನ್ನು ಮಾತ್ರವಲ್ಲದೆ ದುರಂತ ಪಾತ್ರದ ಸಾಧ್ಯತೆಯನ್ನು ಗುರುತಿಸಿದ್ದಾರೆ. ಈ ವಿಷಯವನ್ನು ಕುರಿತು ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೆಯಲ್ಲಿ ಒಂದು ಇಂಗ್ಲಿಷ್ ಲೇಖನವನ್ನೂ ಬರೆದಿದ್ದಾರೆ. ಸಂಸ್ಕೃತ ನಾಟಕಗಳನ್ನು ಕುರಿತ ಲೇಖನದಲ್ಲಿ ನಮ್ಮ ನಾಟಕ ಪರಂಪರೆಯ ಉಗಮಕ್ಕೆ ಸಂಬಂಧಿಸಿದ ಕೆಲವೊಂದು ಸಮಸ್ಯೆಗಳನ್ನು ವಿವರಿಸಿ ಸಮಾಂತರವಾಗಿ ಇಂಗ್ಲಿಷ್ ಹಾಗೂ ಗ್ರೀಕ್ ನಾಟಕ ಪರಂಪರೆಯಿಂದ ಅದು ಹೇಗೆ ಬೇರೆಯಾಗಿದೆ ಎನ್ನುವುದನ್ನು ವಿವರಿಸಿ ಪರಂಪರೆ ಯಾವುದಾದರೂ ನಾಟಕವಿಮರ್ಶೆ ಗಮನಿಸಬೇಕಾಗಿ ನಾಟಕಗಳೆಲ್ಲದರಲ್ಲಿಯೂ ಇರಬೇಕಾದ ಸಮಾನಾಂಶಗಳನ್ನು ವಿಶ್ಲೇಷಿಸಿ ಅವವುಗಳ ಕಾರ್ಯವಿಶೇಷಗಳನ್ನು ತಿಳಿಸಿದ್ದಾರೆ.

ಮೇಲಿನ ಎರಡೂ ಲೇಖನಗಳು ಮುನ್ನುಡಿಗಳೆಂದು ಬರೆದವು. ಇವಕ್ಕೂ ಚಿಕ್ಕವಾದ, ಬೇರೆ ಕೆಲವು ಮುನ್ನುಡಿಗಳು, ವಿಮರ್ಶೆಗಳು, ಈ ಗ್ರಂಥದಲ್ಲಿವೆ. ಉಳಿದ ಲೇಖನಗಳು (ಅಥವಾ ಭಾಷಣಗಳ ವರದಿಗಳು) ಎಲ್ಲವೂ ಕನ್ನಡದ ಪುನರುತ್ಥಾನ, ಬೆಳವಣಿಗೆ, ಅವುಗಳ ಸಮಸ್ಯೆಗಳಿಗೆ ಸಂಬಂಧಿಸಿದುವಾಗಿವೆ. ಕನ್ನಡದ ಬಗೆಯಲ್ಲಿ ಅವರು ಇರಿಸಿಕೊಂಡಿದ್ದ ಆಕಾಂಕ್ಷೆಯನ್ನು ಕುರಿತು ಅದು ತಮ್ಮ ಜೀವದುಸಿರು ಎಂದು ಅವರೆಹೇಳಿದರು. ಬೇರೆ ಮಾತನ್ನು ಹೇಳಬೇಕಿಲ್ಲ. ಹತ್ತಾರು ಸಂದರ್ಭಗಳಲ್ಲಿ ಅವರ ಆಕಾಂಕ್ಷೆ ಹೇಗೆ ವ್ಯಕ್ತವಾಗುತ್ತಿತ್ತು, ಅದರ ಸಾಧನೆಗೆ ಅವರು ಹೇಗೆ ತಮ್ಮ ಜೀವವನ್ನು ಮುಡಿಪಾಗಿ

ಸಿದ್ದರು ಎನ್ನುವುದು ಅವರ ಭಾಷಣಗಳ ಇಲ್ಲಿಯ ಲಘು ವರದಿಗಳಲ್ಲಿಯೂ ವ್ಯಕ್ತವಾಗುತ್ತದೆ.

(೧೪)

ಶ್ರೀ ಶಂಕರಯ್ಯನವರಿಂದ ಕನ್ನಡ ಉಳಿಯಿತು ಎನ್ನುವ ಮಾತಾಗಲಿ, ಈ ಶತಮಾನದ ಪೂರ್ವಾರ್ಧದಲ್ಲಿಯ ನವೋದಯ ಅವರ ಮೂಲಕ ಸಿದ್ಧಿಸಿತೆಂಬ ಮಾತಾಗಲಿ ಅತಿಶಯವಾಗಿ ಕಾಣಬಹುದು. ಆದರೆ ಅವರು ಕನ್ನಡಕ್ಕಾಗಿ ಬದುಕಿದರು. ಅದರ ಪುನರುಜ್ಜೀವನವನ್ನು ತಮ್ಮ ಬದುಕಿನ ಗುರಿಯನ್ನಾಗಿಸಿಕೊಂಡು ಅದರ ಸಾಧನೆಗೆ ಜೀವನವನ್ನು ಮುಡಿಪಾಗಿಸಿದರು ಎನ್ನುವುದರಲ್ಲಿ ಯಾವ ಅತಿಶಯದ ಅಂಶವೂ ಇಲ್ಲ. ಕನ್ನಡದ ನವೋದಯ ಒಂದು ಚಾರಿತ್ರಿಕ ಬೆಳವಣಿಗೆ: ಹತ್ತಾರು ಬಗೆಯ ಪ್ರಭಾವಗಳ ಸಂಕೀರ್ಣ ಅದು. ಆದರೆ ಹಳೆಯದು ತನ್ನ ಸಾಮರ್ಥ್ಯವನ್ನು ಕಳೆದುಕೊಂಡು ಹೊಸದು ರೂಪುಗೊಳ್ಳಬೇಕಾಗಿದ್ದ ಸಂಧಿಕಾಲದಲ್ಲಿ ಮುಂದಿನ ದಾರಿಯನ್ನು, ಗುರಿಯನ್ನು ಸ್ಪಷ್ಟವಾಗಿ ಗುರುತಿಸಿ ಮಾರ್ಗದರ್ಶನ ಮಾಡಿದವರು ಅವರು. 'ಇದು ಗುರಿ. ಇದು ದಾರಿ' ಎಂದು ಹೇಳಿದರಲ್ಲದೆ 'ಅದನ್ನು ಹೀಗೆ ಸಾಧಿಸಬಹುದು' ಎಂದು ಬರೆದು ತೋರಿಸಿದರು. ಅವರು ಬರೆದದ್ದು ಏನೇ ಇರಲಿ, ಎಷ್ಟೇ ಇರಲಿ, ಅದರ ಮಹತ್ವ ಚಾರಿತ್ರಿಕ ದೃಷ್ಟಿಯಿಂದ ಬಹಳ ಹೆಚ್ಚಿನದು. ಆದರೆ ಅದಕ್ಕಿಂತ ಹೆಚ್ಚಿನದು ಕನ್ನಡದ ಬಗೆಯಲ್ಲಿಯ ಅವರ ಅಭಿಮಾನ, ಪ್ರೀತಿ, ಶ್ರದ್ಧೆ. ಅದು ಬೆಳೆಯ ಬೇಕೆಂಬ ಆಕಾಂಕ್ಷೆ. ಅದನ್ನೇ ತಮ್ಮ ಜೀವನದ ಧ್ಯೇಯವನ್ನಾಗಿಸಿಕೊಂಡರು. ಕನ್ನಡ ಅವರ ಜೀವ ಮಂತ್ರವಾಯಿತು.

ಅವರ ಐವತ್ತೇಳನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ ಅವರಿಗೆ "ಸಂಭಾವನೆ" ಎಂಬ ಪುಸ್ತಿಕೆಯ ಗ್ರಂಥವನ್ನು ಅರ್ಪಿಸಿದಾಗ ಅವರು ಹೇಳಿದ ಮಾತುಗಳು ಅವರ ಜೀವನದರ್ಶನವನ್ನು, ಇರಿಸಿಕೊಂಡ ಉದ್ದೇಶಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಆ ಮಾತುಗಳನ್ನು ಹೀಗೆ ಸಂಗ್ರಹಿಸಬಹುದು—

"ಕನ್ನಡಭಾಷೆ ಒಂದು ಪ್ರಾಂತದ ಭಾಷೆಯಾಗಿರಬಹುದು. ಆದರೆ ಅದು ಇಂದಿನ ಆವಶ್ಯಕತೆಗಳಿಗೆಲ್ಲ ಒದಗಿ, ಕನ್ನಡಿಗರ ಜೀವಾಳವಾಗಬೇಕು. ಹಳೆಯ

ನುಡಿ ಹೊಸದಾಗಬೇಕು. ಜನತೆಗಾಗಿ ಹಬ್ಬಿ ಬ್ರಹ್ಮಾನುಭವಕ್ಕೆ ಒದಗ ಬೇಕೆಂಬುದೇ ನನ್ನ ಬಯಕೆ. ಕನ್ನಡ ಹೀಗೆ ಏಳಿಗೆ ಹೊಂದಬೇಕೆಂಬುದು ನನ್ನ ದೀಕ್ಷೆ. ಕಲಿಯುವುದೇ ನನ್ನ ಜೀವನದ ಕರೆ; ಕಲಿಯುವುದು, ಕಲಿತ್ತದನ್ನು ತಿಳಿಯದವರಿಗೆ ಕಲಿಸುವುದು. ಇದು ಸಣ್ಣದು, ಅದು ದೊಡ್ಡದು ಎಂಬ ಭಾವನೆ ನನಗೆ ಒಲ್ಲದು. ಈ ಪ್ರಪಂಚದಲ್ಲಿ ನಿರ್ದುಷ್ಟವಾದದ್ದು, ಪರಿಪೂರ್ಣ ವಾದದ್ದು ಯಾವುದೂ ಇಲ್ಲ. ಕನ್ನಡ ಪ್ರಪಂಚ ಚಿಕ್ಕದೆಂದು ನಾವು ನಮ್ಮ ಆವರಣವನ್ನು ಕೊಂಪೆಯಂತೆ ನಿರ್ಮಿಸಿಕೊಂಡು ಕುಳಿತುಕೊಳ್ಳಬಾರದು. ದೊಡ್ಡದೆಂದು ಮತ್ತೊಂದರ ಅಂಧಾನುಕರಣದಲ್ಲೇ ಸಿಕ್ಕಿಕೊಳ್ಳಬಾರದು. ಕನ್ನಡದವರ ದೃಷ್ಟಿ ವಿಶಾಲವಾಗಬೇಕು. ಬೆಳಕು ಗಾಳಿ ಎಲ್ಲೆಲ್ಲಿಂದ ಬರುವುವೋ ಅಲ್ಲಿಂದೆಲ್ಲಾ ಅವನ್ನು ನಮ್ರತೆಯಿಂದ, ಭಕ್ತಿಯಿಂದ, ಸ್ವಾಗತಿಸಿ ನಮ್ಮ ಸಂಸ್ಕೃತಿಯನ್ನೂ ತೇಜಸ್ಸನ್ನೂ ಬೆಳಸಿಕೊಳ್ಳಬೇಕು."

—o—

ಪ್ರಮಾದವಶಾತ್ ಕೆಲವು ಅಚ್ಚಿನ ತಪ್ಪುಗಳು ನುಸುಳಿವೆ. ತಪ್ಪೋಲೆಯನ್ನು ನೋಡಬೇಕಾಗಿ ವಿನಂತಿ.

| ಪುಟ | ಪ್ಯಾರಾ | ಸಾಲು | ತಪ್ಪು | ಸರಿ |
|---|---|---|---|---|
| 1 | 1 | 1 | ಶತಮಾನದ | ಈ ಶತಮಾನದ |
| 2 | 2 | 1 | ಉತ್ತಾರಾರ್ಧದಲ್ಲಿಯು | ಉತ್ತರಾರ್ಧದಲ್ಲಿಯು |
| 2 | 2 | 5 | ಅನೇಕ | ಅನೇಕ |
| 2 | 2 | 10 | ಪಡುವಳಿಯಲ್ಲಿಯು | ನಡೆವಳಿಯಲ್ಲಿಯು |
| 2 | 2 | 12 | ಕರೂರ | ಕೆರೂರ |
| 3 | 1 | 1 | ಮುದ್ದಣ್ಣನೇ | ಮುದ್ದಣ |
| 4 | 2 | 10 | ಪ್ರಾದ್ಯಾಪಕರೆಂಬ | ಪ್ರಾಧ್ಯಾಪಕರೆಂಬ |
| 8 | 1 | 2 | ಯೊರೊಬ್ಬರ | ಯಾರೊಬ್ಬರ |
| 8 | 3 | 9 | ಪ್ರಸ್ತಾಪನೆ | ಪ್ರಸ್ತಾವನೆ |
| 10 | 1 | 2 | ಅನ್ಯಾದೃಶರಿರಾದ | ಅನ್ಯಾದೃಶರಾದ |
| 11 | 1 | 19 | ಗೂತ್ತುಪಡಿಸಲಾಗಿದ್ದ | ಗೊತ್ತುಪಡಿಸಲಾಗಿದ್ದ |
| 11 | 2 | 2 | 'ಮನುಷ್ದನ | ಮನುಷ್ಯನ |
| 12 | 1 | 10 | ಕೂಲಂಕುಷ | ಕೂಲಂಕಷ |
| 12 | 1 | 18 | ಮುಂತದ | ಮುಂತಾದ |
| 12 | 1 | 18 | ಷವಿಯ | ವಿಷಯ |
| 13 | 1 | 1 | ಸಂತೋಷವನು | ಸಂತೋಷವನ್ನು |
| 13 | 1 | 16 | ರಸಾನುಬವದ | ರಸಾನುಭವದ |
| 13 | 2 | 7 | ಸಮನಾಗಿರಿ | ಸಮನಾಗಿ |
| 15 | 1 | 5 | ಕೆಲಸಗಿರಲಿಲ್ಲ | ಕೆಲಸವಾಗಿರಲಿಲ್ಲ |
| 15 | 2 | 10 | ಬಾಹ್ಯವಿಷಾರಗಳ | ಬಾಹ್ಯ ವಿಚಾರಗಳ |
| 16 | 1 | 1 | 'ಒಂದು | ಒಂದು |
| 16 | 2 | 6 | ಸಿದ್ದಿ | ಸಿದ್ಧಿ |

## ಕರ್ನಾಟಕ ಸಾಹಿತ್ಯ ಅಕಾದೆಮಿ ಪ್ರಕಟಣೆಗಳು

| | | |
|---|---|---|
| ಕನ್ನಡದಲ್ಲಿ ಅರವಿಂದ ದರ್ಶನ | ಬೆಲೆ ರೂ. | 3–00 |
| ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ | | 3–00 |
| ವಿಮರ್ಶಾ ತತ್ತ್ವಗಳು ಮತ್ತು ಪ್ರಾಯೋಗಿಕ ವಿಮರ್ಶೆ (ಸಂ. ವಿ. ಕೃ. ಗೋಕಾಕ್ ಮತ್ತು ಆರ್. ಜಿ. ಕುಲಕರ್ಣಿ) | | 40–00 |
| ಕತೆಗಳು—1979 (ಸಂ. ಬಿ. ವಿ. ವೈಕುಂಠರಾಜು) | | 1–50 |
| ಕವಿತೆಗಳು–1979 (ಸಂ. ಡಾ. ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ | | 1–50 |
| ಸಾಹಿತ್ಯ ವಿಮರ್ಶೆ–1979 (ಸಂ. ಡಾ. ಜಿ. ಎಸ್. ಶಿವರುದ್ರಪ್ಪ) | | 1–50 |
| ಕತೆಗಳು–1980 (ಸಂ.ಬಿ. ಶಾಮಸುಂದರ) | | 1–50 |
| ಕವಿತೆಗಳು–1980 (ಸಂ. ಚೆನ್ನವೀರ ಕಣವಿ) | | 1–50 |
| ಸಾಹಿತ್ಯ ವಿಮರ್ಶೆ 1980 (ಸಂ. ಡಾ. ಸಿ. ಪಿ. ಕೃಷ್ಣಕುಮಾರ್) | | 1–50 |
| ಕತೆಗಳು–1981 (ಸಂ. ಗಿರಡ್ಡಿ ಗೋವಿಂದರಾಜ್) | | 1–50 |
| ಕವಿತೆಗಳು–1981 (ಸಂ. ಎಚ್. ಎಸ್. ವೆಂಕಟೇಶಮೂರ್ತಿ) | | 1–50 |
| ಸಾಹಿತ್ಯ ವಿಮರ್ಶೆ–1981 (ಸಂ. ಕೆ. ವಿ. ನಾರಾಯಣ) | | 1–50 |
| ಕವಿತೆಗಳು– 982 (ಸಂ. ಕೆ. ಎಸ್. ನಿಸಾರ್ ಅಹಮದ್) | | 1–50 |
| ಕತೆಗಳು–1982 (ಸಂ. ಈಶ್ವರಯ್ಯ) | | 1–50 |
| ಸಾಹಿತ್ಯ ವಿಮರ್ಶೆ– 982 (ಸಂ. ನರಹಳ್ಳಿ ಬಾಲಸುಬ್ರಹ್ಮಣ್ಯ) | | 1–50 |